# ಸಾಮಾಜಿಕ ವೈವಿಧ್ಯತೆ ಮತ್ತು ಶಿಕ್ಷಣ

**1.1 ಪೀಠಿಕೆ:**

**ಭಾ**ರತವು ರಾಷ್ಟ್ರವಾಗಿ ಒಂದೇ; ಆದರೆ ಇದು ಬಹುತ್ವ ಸಮಾಜ. ಅದರ ಬಹುತ್ವವು ಭೌಗೋಳಿಕ, ಜನಸಂಖ್ಯೆ, ಐತಿಹಾಸಿಕ, ರಾಜಕೀಯ, ಆರ್ಥಿಕ ಮತ್ತು ಸಾಮಾಜಿಕ-ಸಾಂಸ್ಕೃತಿಕ ನೆಲೆಗಳಲ್ಲಿ ಅಂತರ್ನಿರ್ಮಿತವಾದುದು. ಅದರ ಸಾಮಾಜಿಕ ವೈವಿಧ್ಯತೆಯು ಭಾಷೆಗಳು, ಧರ್ಮಗಳು, ಬುಡಕಟ್ಟುಗಳು ಮತ್ತು ಜಾತಿಗಳಂತಹ ವಿವಿಧ ರೂಪಗಳಲ್ಲಿ ವ್ಯಕ್ತವಾಗುತ್ತದೆ. ಸಾಮಾಜಿಕ ವೈವಿಧ್ಯತೆಯು ಐತಿಹಾಸಿಕ ಸತ್ಯವಾಗಿದ್ದರೂ, ಅದರೊಟ್ಟಿಗೇ ಒಂದು ಬಗೆಯ ಸಮನ್ವಯವೂ ಸಹಿತ ಹರಳುಗಟ್ಟಿದೆ. 'ವಿವಿಧತೆಯಲ್ಲಿ ಏಕತೆ'ಯು ಭಾರತೀಯ ಸಮಾಜದ ಲಕ್ಷಣವೆಂದು ಪ್ರತ್ಯೇಕವಾಗಿ ಹೇಳಬೇಕಾಗೇ ಇಲ್ಲ. ಒಟ್ಟಾರೆ ರಾಷ್ಟ್ರೀಯ ಭಾರತೀಯ ಅಸ್ಮಿತೆಯೊಳಗೆ ವಿವಿಧ ಸ್ಥಳೀಯ ಮತ್ತು ಪ್ರಾದೇಶಿಕ ಅಸ್ಮಿತೆಗಳೂ ಉಳಿದುಕೊಂಡಿವೆ. ಪ್ರತಿಯೊಬ್ಬ ವ್ಯಕ್ತಿಯೂ ತನ್ನ ದಿನನಿತ್ಯದ ಜೀವನದಲ್ಲಿ ರಾಷ್ಟ್ರೀಯ ಮತ್ತು ಪ್ರಾದೇಶಿಕ ಅಸ್ಮಿತೆಗಳ ಅಖಾಡದ ಮೂಲಕ ನಿಯಮಿತವಾಗಿ ಹಾದು ಹೋಗುತ್ತಾರೆ. ಅವರೆಲ್ಲಾದರೂ ಪ್ರಾದೇಶಿಕ, ಭಾಷಿಕ, ಅಥವಾ ಧಾರ್ಮಿಕ ಅಸ್ಮಿತೆಗಳಿಗೆ ಹೆಚ್ಚಿನ ಒತ್ತು ನೀಡಿದರೆ ರಾಷ್ಟ್ರೀಯ ಚೌಕಟ್ಟು ಸಡಿಲವಾಗಿ ಸಂಘರ್ಷಕ್ಕೆ ಎಡೆಯಾಗಿಬಿಡಬಹುದು, ರಾಷ್ಟ್ರೀಯ ಅಸ್ಮಿತೆಯ ಮೇಲೆ ಅತಿಯಾದ ಒತ್ತು ನೀಡಿದರೆ ಏಕಾಕೃತಿಯ ರಾಷ್ಟ್ರ ಪ್ರಭುತ್ವಕ್ಕೆ ಎಡೆಯಾಗಿ ಪ್ರಾದೇಶಿಕ ಅಥವಾ ಉಪರಾಷ್ಟ್ರೀಯ ಚಹರೆಗಳ ಸಾಂಸ್ಕೃತಿಕ ಪರಂಪರೆಯು ನಾಶವಾಗಬಹುದು.

ಅಸ್ಮಿತೆಗಳನ್ನು ಸಂರಕ್ಷಿಸುವ, ಮಾರ್ಪಡಿಸುವ ಮತ್ತು ಪರಿವರ್ತಿಸುವ ಪ್ರಕ್ರಿಯೆಯಲ್ಲಿ ಶಿಕ್ಷಣವು ಪ್ರಮುಖ ಪಾತ್ರವನ್ನು ವಹಿಸುತ್ತದೆ. ವೈವಿಧ್ಯವೇ ಭಾರತೀಯ ಸಮಾಜದ ಲಕ್ಷಣ ವಿಶೇಷ ಎನ್ನುವುದನ್ನು ಗಮನದಲ್ಲಿಟ್ಟುಕೊಂಡೇ ಶಿಕ್ಷಣದ ರಾಷ್ಟ್ರೀಯ ನೀತಿಯು ಎಲ್ಲಾ ಗುಂಪುಗಳ ಸುಸಂಗತ ಪುರೋಭಿವೃದ್ಧಿಯನ್ನು - ಅಂದರೆ, ಗುಂಪು ಅಸ್ಮಿತೆಗಳ ಏಕೀಕೃತ ನಿರ್ವಹಣೆ ಮತ್ತು ಅಭಿವೃದ್ಧಿಯನ್ನು - ಪರಿಭಾವಿಸುತ್ತದೆ. ಸಾಂವಿಧಾನಿಕ ನಿಬಂಧನೆಯಲ್ಲಿ ಶಿಕ್ಷಣದ ಸಮತೋಲನ ದೃಷ್ಟಿಯು ಚೆನ್ನಾಗಿ ಪ್ರತಿಫಲಿತವಾಗಿದೆ. ಶಿಕ್ಷಣವನ್ನು ಸಂವಿಧಾನದ ಸಮವರ್ತಿ ಪಟ್ಟಿಯ ಅಡಿಯಲ್ಲಿ ವರ್ಗೀಕರಿಸಲಾಗಿರುವುದರಿಂದ ಅದು ರಾಷ್ಟ್ರೀಯ ಮತ್ತು ಉಪರಾಷ್ಟ್ರೀಯ ಅಸ್ಮಿತೆಗಳ ಬೆಳವಣಿಗೆಗೆ ಅವಕಾಶವನ್ನು ನೀಡಲು ಸಾಧ್ಯವಾಗಿದೆ. ಭಾರತದ ಸಂವಿಧಾನವು ಒಂದೆಡೆ ದೇಶದ ಎಲ್ಲಾ ರೀತಿಯ ಶಿಕ್ಷಣದಲ್ಲಿ ಅಳವಡಿಸಿಕೊಳ್ಳಬೇಕಾದ ಮೂಲಭೂತ ಕರ್ತವ್ಯಗಳ ಕುರಿತು ಮಾತನಾಡುತ್ತಿದ್ದರೆ, ಮತ್ತೊಂದೆಡೆ ರಾಜ್ಯ ನೀತಿ ನಿರ್ದೇಶಕ ತತ್ವಗಳ ಅಡಿಯಲ್ಲಿ ದುರ್ಬಲ ವರ್ಗಗಳ ಆರ್ಥಿಕ ಮತ್ತು ಶೈಕ್ಷಣಿಕ ಹಿತಾಸಕ್ತಿಗಳನ್ನು ರಕ್ಷಿಸಲು ಮತ್ತು ಉತ್ತೇಜಿಸಲು ಸರಕಾರಕ್ಕೆ ನಿರ್ದೇಶಿಸುತ್ತದೆ. ಇದು ಧಾರ್ಮಿಕ ಮತ್ತು ಭಾಷಾ ಅಲ್ಪಸಂಖ್ಯಾತ ಗುಂಪುಗಳ ಶಿಕ್ಷಣವನ್ನು ಸಹ ಉತ್ತೇಜಿಸುತ್ತದೆ.

ಈ ಘಟಕವು- ಭಾರತೀಯ ಸಂದರ್ಭದಲ್ಲಿ 'ಸಾಮಾಜಿಕ ವೈವಿಧ್ಯತೆ' ಎಂದರೆ ಏನು? ಈ ಸಾಮಾಜಿಕ ಗುಂಪುಗಳು ಯಾವುವು? ಸಾಮಾಜಿಕ ವೈವಿಧ್ಯತೆಯ ಶೈಕ್ಷಣಿಕ ಇಂಗಿತಾರ್ಥವೇನು? ಈ ಗುಂಪುಗಳಿಗೆ ಸಮಾನ ಅವಕಾಶ ಮತ್ತು ಅವುಗಳ ನಡುವೆ ಸಾಮರಸ್ಯದ ಬೆಳವಣಿಗೆಯ ಅವಕಾಶ ಒದಗಿಸುವಲ್ಲಿ ಶಿಕ್ಷಣವು ಯಾವ ಪಾತ್ರವನ್ನು ವಹಿಸುತ್ತದೆ? - ಇಂತಹ ಹಲವಾರು ಪ್ರಶ್ನೆಗಳನ್ನು ಚರ್ಚಿಸುತ್ತದೆ. ಇದರ ಮೊದಲ ವಿಭಾಗವು ಭಾರತದಲ್ಲಿ ಅಸ್ತಿತ್ವದಲ್ಲಿರುವ ಸಾಮಾಜಿಕ ವೈವಿಧ್ಯತೆಯ ಅರ್ಥ, ಸ್ವರೂಪ ಮತ್ತು ಪ್ರಕಾರಗಳನ್ನು ವಿವರಿಸಿದರೆ, ಎರಡನೆಯ ವಿಭಾಗವು ಭಾರತದ ಶಿಕ್ಷಣ ವ್ಯವಸ್ಥೆಯ ಮೇಲೆ ಸಾಮಾಜಿಕ ವೈವಿಧ್ಯತೆಯ ಪ್ರಭಾವವನ್ನು ಪರಿಶೀಲಿಸುತ್ತದೆ ಮತ್ತು ಮೂರನೆಯ ವಿಭಾಗವು ಸಾಮಾಜಿಕ ವೈವಿಧ್ಯತೆಯ ಕಾರಣದಿಂದಾಗಿ ಭಾರತೀಯ ಶಿಕ್ಷಣ ವ್ಯವಸ್ಥೆಯು ಎದುರಿಸಬೇಕಾದ ಕೆಲವು ಹೊಸ ಸವಾಲುಗಳನ್ನು ಗುರುತಿಸುತ್ತದೆ.

**1.2 ಉದ್ದೇಶಗಳು**

ಈ ಘಟಕವನ್ನು ಓದಿದ ನಂತರ ನೀವು ಈ ಕೆಳಗಿನ ಅಂಶಗಳನ್ನು ಕಲಿತಿರುತ್ತಿರಿ:

- ಭಾರತದ ಸಾಮಾಜಿಕ ವೈವಿಧ್ಯತೆಯ ಸಂಕೀರ್ಣ ಸ್ವರೂಪವನ್ನು ಗುರುತಿಸಲು,
- ವಿವಿಧ ಗುಂಪುಗಳು ಎದುರಿಸುತ್ತಿರುವ ಶೈಕ್ಷಣಿಕ ಸಮಸ್ಯೆಗಳನ್ನು ಅರ್ಥಮಾಡಿಕೊಳ್ಳಲು,
- ಅಭಿವೃದ್ಧಿಗೆ ಸಮಾನ ಅವಕಾಶವನ್ನು ಒದಗಿಸುವಲ್ಲಿ ಮತ್ತು ಸಾಮರಸ್ಯ ಸ್ಥಾಪಿಸುವಲ್ಲಿ ಶಿಕ್ಷಣದ ಪಾತ್ರವನ್ನು ವಿವರಿಸಲು ಸಾಧ್ಯವಾಗುತ್ತದೆ.

ನಮ್ಮ ಸಮಾಜದಲ್ಲಿ ಚಾಲ್ತಿಯಲ್ಲಿರುವ ಸಾಮಾಜಿಕ ವೈವಿಧ್ಯತೆಯ ಸ್ವರೂಪವನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸುವ ಮೂಲಕ ನಮ್ಮ ಚರ್ಚೆಯನ್ನು ಪ್ರಾರಂಭಿಸೋಣ.

**1.3 ಸಾಮಾಜಿಕ ವೈವಿಧ್ಯತೆಗಳ ವಿವರಣೆ**

ಭಾರತವು ಬಹುಶಃ ವಿಶ್ವದಲ್ಲೇ ಅತಿ ದೊಡ್ಡ ಮತ್ತು ಅತಿ ಹೆಚ್ಚು ವೈವಿಧ್ಯತೆಯಿರುವ ಸಮಾಜವೆಂದು ಪರಿಗಣಿತವಾಗಿದೆ. ಭಾರತದಲ್ಲಿ ಜನರು ವಿವಿಧ ಭಾಷೆಗಳನ್ನು ಮಾತನಾಡುತ್ತಾರೆ; ವಿವಿಧ ಬಗೆಯ ಲಿಪಿಗಳನ್ನು ಬಳಸುತ್ತಾರೆ. ಭಾರತ ದೇಶವು ಪ್ರಮುಖ ಧರ್ಮಗಳನ್ನೆಲ್ಲ ಹೊಂದಿದೆ - ಬೌದ್ಧ, ಕ್ರಿಶ್ಚಿಯನ್, ಹಿಂದೂ, ಇಸ್ಲಾಂ, ಸಿಖ್ ಮತ್ತು ಝೋರಾಸ್ಟ್ರಿಯನ್ ಧರ್ಮಗಳು ಅಕ್ಕಪಕ್ಕದಲ್ಲಿ ವಾಸಿಸುತ್ತಿವೆ. ಪ್ರಪಂಚದ ಅತ್ಯಂತ ಸಂಕೀರ್ಣವಾದ ಮತ್ತು ಸಮಗ್ರವಾಗಿ ಬಹುತ್ವದ ಸಮಾಜವಾಗಿರುವ ಭಾರತವು ವೈವಿಧ್ಯಮಯ ಜಾತಿಗಳು, ಬುಡಕಟ್ಟುಗಳು, ಧರ್ಮಗಳು, ಭಾಷೆಗಳು, ಪದ್ಧತಿಗಳು, ಜೀವನ ಶೈಲಿಗಳಿಗೆ ನೆಲೆಯಾಗಿದೆ. ಇಲ್ಲಿ ಸುಮಾರು 4,559 ಪ್ರತ್ಯೇಕ ಸಮುದಾಯಗಳು, ಹನ್ನೆರಡು ವಿಭಿನ್ನ ಭಾಷಾ ಕುಟುಂಬಗಳಿಗೆ ಸೇರಿದ 325 ಭಾಷೆಗಳು ಮತ್ತು ಉಪಭಾಷೆಗಳು ಮತ್ತು ಸುಮಾರು 24 ಲಿಪಿಗಳು ಇವೆಯೆಂದು ಆಂಥ್ರೋಪೊಲಾಜಿಕಲ್ ಸರ್ವೆ ಆಫ್ ಇಂಡಿಯಾ ಅಂದಾಜಿಸಿದೆ. ಭಾರತೀಯತೆಯ ಅರ್ಥವನ್ನು ರೂಪಿಸುವ ಅಸ್ಮಿತೆಗಳನ್ನು ಪ್ರತಿಷ್ಠಾಪಿಸುವ ಸ್ತಬ್ಧಚಿತ್ರವನ್ನು ಪ್ರತಿವರ್ಷ ಗಣರಾಜ್ಯೋತ್ಸವದಂದು ಪ್ರದರ್ಶಿಸಲಾಗುತ್ತದೆ. ಮೇಲಾಗಿ, ಮೊದಲ ಚರಣದಲ್ಲೇ ವಿಭಿನ್ನ ಭೌಗೋಳಿಕ ಪ್ರದೇಶಗಳು, ಜನಾಂಗಗಳು ಮತ್ತು ಸಂಸ್ಕೃತಿಗಳ ಹೆಸರುಗಳ ಸರಣಿಯಿರುವ ರಾಷ್ಟ್ರಗೀತೆಯು ಇಲ್ಲಿಯ ವೈವಿಧ್ಯವನ್ನು ಸಾರಿ ಹೇಳುತ್ತದೆ.

### 1.3.1 ಸಾಮಾಜಿಕ ವೈವಿಧ್ಯತೆಯ ಅರ್ಥ ಮತ್ತು ಸ್ವರೂಪ

'ಸಾಮಾಜಿಕ ವೈವಿಧ್ಯತೆ' ಎಂದರೆ ನಿರ್ದಿಷ್ಟ ಭೌಗೋಳಿಕ-ರಾಜಕೀಯ ಆವರಣದಲ್ಲಿ ವಿಭಿನ್ನ ಸಾಮಾಜಿಕ ಗುಂಪುಗಳ ಸಹ-ಅಸ್ತಿತ್ವ ಅಥವಾ, ಇನ್ನೂ ಸರಳ ಪದಗಳಲ್ಲಿ, ಸಮಾಜವನ್ನು ಗುಂಪುಗಳಾಗಿ ಪ್ರತ್ಯೇಕಿಸುವುದು ಎಂದರ್ಥ. ಈ ವೈಶಿಷ್ಟ್ಯವನ್ನು ವಿವರಿಸಲು 'ಬಹುತ್ವ', 'ಬಹುಸಾಂಸ್ಕೃತಿಕತೆ', 'ಸಾಮಾಜಿಕ ಭಿನ್ನತೆ' ಇತ್ಯಾದಿ ಇತರ ಪದಗಳನ್ನೂ ಸಹ ಪರಸ್ಪರ ಬದಲಿಯಾಗಿ ಬಳಸಲಾಗುತ್ತದೆ. ವೈವಿಧ್ಯತೆಯು ಅದು ಹೇಗೆ ಸಂಯೋಜಿಸಲ್ಪಟ್ಟಿದೆ ಎನ್ನುವುದನ್ನು ಅವಲಂಬಿಸಿ ಕ್ರಿಯಾರಹಿತವೂ ಆಗಿರಬಹುದು, ಕ್ರಿಯಾಶೀಲವೂ ಆಗಿರಬಹುದು. ಈ ಹಂತದಲ್ಲಿ ಏಳಬಹುದಾದ ಪ್ರಶ್ನೆಯೆಂದರೆ 'ಒಂದು ಸಮಾಜವು ತನ್ನ ಸಾವಯವ ಏಕತೆಯನ್ನು ಕಳೆದುಕೊಳ್ಳದೆ ಎಷ್ಟರ ಮಟ್ಟಿಗೆ ಬಹುತ್ವದ್ದಾಗಿರಬಲ್ಲದು'? ಗುಂಪುಗಳಾಗಿ ವಿಭಜನೆಗೊಂಡಿದ್ದರೂ ಸಹಿತ ಇಡೀ ಭಾರತೀಯ ಸಾಮಾಜಿಕ ವ್ಯವಸ್ಥೆಯಲ್ಲಿ ಏಕತೆಯು ಒಂದು ಒಳಪ್ರವಾಹವಾಗಿ ಹರಿಯುತ್ತಿದೆ. ಭಾರತದಲ್ಲಿ ಸಾಮಾಜಿಕ ವೈವಿಧ್ಯತೆಯ ಸ್ವರೂಪವನ್ನು ಅರ್ಥಮಾಡಿಕೊಳ್ಳಲು ಈ ವೈವಿಧ್ಯತೆಯನ್ನು ರೂಪಿಸಿರುವ ಗುಂಪು ಅಸ್ಮಿತೆಗಳ ಸ್ವರೂಪವನ್ನು ಅರ್ಥಮಾಡಿಕೊಳ್ಳುವುದು ಮುಖ್ಯವಾಗಿದೆ.

### 1.3.2 ಸಾಮಾಜಿಕ ವೈವಿಧ್ಯತೆಯ ವಿಧಗಳು

ಜನಾಂಗೀಯ ಮೂಲಗಳು, ಧರ್ಮಗಳು ಮತ್ತು ಭಾಷೆಗಳು - ಇವೇ ಸಾಮಾಜಿಕ ವೈವಿಧ್ಯತೆಯ ಪ್ರಮುಖ ಆಕರಗಳಾಗಿವೆ. ಸೊರೊಕಿನ್ ಅವರ ಪ್ರಕಾರ ಸಾಮಾಜಿಕ ಭಿನ್ನತೆಯನ್ನು ಎರಡು ಬಗೆಯದಾಗಿ ವರ್ಗೀಕರಿಸಬಹುದು:ಎ. ಗುಂಪಿನ - ಒಳಗೆ (ಗುಂಪಿನೊಳಗಿನ ವ್ಯತ್ಯಾಸಗಳು), ಮತ್ತು ಬಿ. ಗುಂಪಿನ - ನಡುವೆ (ಬೇರೆ ಬೇರೆ ಗುಂಪುಗಳ ನಡುವಿನ ವ್ಯತ್ಯಾಸಗಳು. ಗುಂಪುಗಳನ್ನು ಹೀಗೆ ಕೂಡ ವರ್ಗೀಕರಿಸುವುದು ಸಾಧ್ಯ:ಸಿ. ಏಕಬಂಧಿ (ಜನಾಂಗ, ಲಿಂಗ, ವಯಸ್ಸಿನಂತಹ ಒಂದು ಮುಖ್ಯ ಮೌಲ್ಯ ಅಥವಾ ಆಸಕ್ತಿಯಿಂದ ಒಗ್ಗಟ್ಟಿನ ವ್ಯವಸ್ಥೆಗೆ ಬದ್ಧವಾಗಿರುವ ಗುಂಪುಗಳು); ಡಿ. ಬಹುಬಂಧಿ (ಎರಡು ಅಥವಾ ಅದಕ್ಕಿಂತ ಹೆಚ್ಚು ಜಾತಿ, ಬುಡಕಟ್ಟು, ವರ್ಗಗಳಂತಹ ಏಕಬಂಧಿ ಮೌಲ್ಯಗಳ ಒಗ್ಗೂಡುವಿಕೆಯಿಂದ ರೂಪುಗೊಂಡ ಗುಂಪುಗಳು).

ಗುಂಪಿನೊಳಗಿನ ವ್ಯತ್ಯಾಸವೆಂದರೆ ಯಾವುದೇ ಒಂದು ಗುಂಪನ್ನು ಅದರೊಳಗಿನ ವಿಭಿನ್ನ ಕಾರ್ಯಗಳನ್ನು ನಿರ್ವಹಿಸುವ ಉಪಗುಂಪುಗಳಾಗಿ ವಿಭಜಿಸುವುದು. ಈ ಕಾರ್ಯಗಳಲ್ಲಿ ಶ್ರೇಷ್ಠ ಕನಿಷ್ಠಗಳೆಂಬ ವ್ಯತ್ಯಾಸವೇನೂ ಇರುವುದಿಲ್ಲ. ಆದರೆ ಈ ಉಪಗುಂಪುಗಳನ್ನು ಮೇಲು-ಕೀಳು, ಶ್ರೇಷ್ಠ-ಕನಿಷ್ಠ ಎಂದು ಶ್ರೇಣೀಕರಿಸಿದಾಗ (ಭಾರತೀಯ ಜಾತಿ ವ್ಯವಸ್ಥೆಯಲ್ಲಿ ಆಗುವಂತೆ) ಗುಂಪಿನ-ಒಳಗಿನ ವ್ಯತ್ಯಾಸವು ಗುಂಪುಗಳ ನಡುವಿನ ವ್ಯತ್ಯಾಸವಾಗಿ ಮಾರ್ಪಡುತ್ತದೆ.

#### ಭಾಷೆ

ಯಾವುದೇ ಸಮಾಜದಲ್ಲಿ ಗುಂಪು-ಒಗ್ಗಟ್ಟಿನ ಪ್ರಮುಖ ಗುರುತುಗಳಲ್ಲಿ ಭಾಷೆಯೂ ಒಂದು. ಭಾಷಾಧಾರಿತ ಸಾಮಾಜಿಕ ವರ್ಗೀಕರಣವು ಧರ್ಮ, ವರ್ಗ, ಜಾತಿ, ಬುಡಕಟ್ಟು ಮುಂತಾದ ಬೇರಾವುದೇ ಪ್ರಕಾರದ ಸಾಮಾಜಿಕ ಗುರುತನ್ನು ಆಧರಿಸಿದ ವರ್ಗೀಕರಣಕ್ಕಿಂತ ಹೆಚ್ಚು ದೃಢವಾದದ್ದು. ಭಾಷಾ ಅಸ್ಮಿತೆಗಳು ಇತರ ಪ್ರಕಾರಗಳೊಂದಿಗೆ ಸಂಯೋಜಿಸಲ್ಪಟ್ಟಾಗ ಗುಂಪಿನ ಅಸ್ಮಿತೆಗಳು ಬಲವಾಗಿ ಪ್ರತಿಪಾದಿತವಾಗುತ್ತವೆ. ಭಾಷೆಗಳ ದೃಷ್ಟಿಯಿಂದ

ಭಾರತವು ಹೆಚ್ಚು ವೈವಿಧ್ಯಮಯವಾಗಿದೆ. ಭಾಷಾಧಾರಿತ ರಾಜ್ಯಗಳ ಪುನರ್ವಿಂಗಡಣೆಯ ಹೊರತಾಗಿಯೂ ಭಾರತವು ಅನೇಕ ಭಾಷಾ ಸಂಬಂಧಿ ಸಮಸ್ಯೆಗಳನ್ನು ಪರಿಹರಿಸಿಕೊಳ್ಳಲು ಸಾಧ್ಯವಾಗಿಲ್ಲ. ರಾಜ್ಯಗಳ ಪುನರ್ವಿಂಗಡನೆಯಡಿಯಲ್ಲಿ ಕೆಲವು ಪ್ರಮುಖ ಭಾಷೆಗಳಿಗೆ ಮಾತ್ರವೇ ಅಧಿಕೃತ ಮಾನ್ಯತೆ ಮತ್ತು ಸಂಪನ್ಮೂಲ ಬೆಂಬಲವನ್ನು ನೀಡಲಾಗಿದೆ. ಕೆಳಗಿನ ಸಮಸ್ಯೆಗಳಿನ್ನೂ ಪರಿಹಾರ ಕಾಣಬೇಕಿವೆ:

ಭಾಷಾ ರಾಷ್ಟ್ರೀಯತೆಯು ಪ್ರಾದೇಶಿಕ ಮಟ್ಟದಲ್ಲಿ ಕ್ರಿಯಾಶೀಲವಾಗಿದೆಯೇ ವಿನಾ ರಾಷ್ಟ್ರೀಯ ಮಟ್ಟದಲ್ಲಲ್ಲ.

ವಿವಿಧ ಹಂತಗಳಲ್ಲಿ ಶಿಕ್ಷಣ ನೀಡಲೆಂದೇ ರೂಪಿಸಲಾದ ತ್ರಿಭಾಷಾ ಸೂತ್ರವನ್ನು ಇನ್ನೂ ಸಂಪೂರ್ಣವಾಗಿ ಅಳವಡಿಸಿಕೊಳ್ಳಲಾಗಿಲ್ಲ.

ಪುನರ್ವಿಂಗಡನೆಯ ಹೊತ್ತಿನಲ್ಲಿ ನಿರ್ದಿಷ್ಟ ರಾಜ್ಯದ ವ್ಯಾಪ್ತಿಯಲ್ಲಿ ಅನುದ್ದೇಶಿತವಾಗಿ ಸೇರಿದ ಭಾಷಾ ಅಲ್ಪಸಂಖ್ಯಾತ ಗುಂಪುಗಳ ಶೈಕ್ಷಣಿಕ, ಸಾಂಸ್ಕೃತಿಕ, ಆರ್ಥಿಕ ಹಿತಾಸಕ್ತಿಯನ್ನು ರಕ್ಷಿಸಲು ರಾಜ್ಯಗಳು ಇನ್ನೂ ತಮ್ಮ ನೀತಿಯನ್ನು ರೂಪಿಸಿಲ್ಲ.

ಶಿಕ್ಷಣಕ್ಕೆ ಸಂಬಂಧಿಸಿದಂತೆ ಭಾಷಾ ವೈವಿಧ್ಯತೆಯ ಪರಿಣಾಮಗಳೇನೆಂದು ಅಭ್ಯಸಿಸಿ ಶಿಕ್ಷಣ ವ್ಯವಸ್ಥೆಯೊಳಗೆ ಅಳವಡಿಸಿಕೊಳ್ಳಲಾಗಿಲ್ಲ.

ನೀತಿಯ ಚೌಕಟ್ಟಿನಲ್ಲಿ ರಾಷ್ಟ್ರೀಯ ಭಾಷಾ ಘಟಕವನ್ನು ಹೊಂದಿರುವುದು ರಾಷ್ಟ್ರೀಯ ಮಟ್ಟದಲ್ಲಿ ಏಕತೆಗೆ ಅವಶ್ಯಕ.

ಭಾರತದ ಸಂವಿಧಾನವು ಹದಿನೈದು ಭಾಷೆಗಳನ್ನು ಪ್ರಮುಖ ಭಾಷೆಗಳೆಂದು ಪಟ್ಟಿ ಮಾಡಿದೆ. ಎಲ್ಲಾ ಪ್ರಮುಖ ಭಾಷೆಗಳೂ ಪ್ರಾದೇಶಿಕ ಮತ್ತು ಉಪಭಾಷಾ ವ್ಯತ್ಯಾಸಗಳನ್ನು ಒಳಗೊಂಡಿವೆ. ಇವುಗಳಲ್ಲದೇ 227 ಭಾಷೆಗಳು / ಉಪಭಾಷೆಗಳನ್ನು ಸಹ ಮಾತೃಭಾಷೆಗಳೆಂದು ಗುರುತಿಸಲಾಗಿದೆ. ಇದು ಭಾಷಾ ಯೋಜನೆ ಮತ್ತು ಉತ್ತೇಜನದ ಕಾರ್ಯವನ್ನು ಕಠಿಣವಾಗಿಸಿದೆ. ಇದಲ್ಲದೇ, ಭಾಷೆಗಳ ದೃಷ್ಟಿಯಿಂದ ಬುಡಕಟ್ಟು ಗುಂಪುಗಳ ವೈವಿಧ್ಯವು ಪರಿಸ್ಥಿತಿಯನ್ನು ಇನ್ನಷ್ಟು ಸಂಕೀರ್ಣಗೊಳಿಸಿದೆ.

**ಧರ್ಮ**

ಧರ್ಮವು ವ್ಯಕ್ತಿಗಳನ್ನು, ಗುಂಪುಗಳನ್ನು ಸಾಮಾಜಿಕವಾಗಿ ಒಂದುಗೂಡಿಸುವ ಪ್ರಮುಖ ಜೋಡಣಾ ಶಕ್ತಿಯಾಗಿದೆ. ಅಲೌಕಿಕ ಜೀವಿ ಅಥವಾ ವಸ್ತುಗಳಲ್ಲಿ ನಂಬಿಕೆಯನ್ನೇ ನಾವು ಸಾಮಾನ್ಯವಾಗಿ ಧರ್ಮವೆನ್ನುತ್ತೇವೆ. ಮನುಷ್ಯ ಸಮಾಜದ ಉದಯದ ಕಾಲದಿಂದಲೂ ಧರ್ಮವು ಭಾರತೀಯ ಸಮಾಜದಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತಿದೆ. ಅದೆಂದೂ ಸ್ಥಾವರಗೊಂಡಿದ್ದಿಲ್ಲ. ಬಹುಧರ್ಮದ ಸಮಾಜದಲ್ಲಿ ಕಾಲ ಕಾಲಕ್ಕೆ ಧರ್ಮಗಳಲ್ಲಿ ಬದಲಾವಣೆಗಳಾಗಿವೆ. ಧಾರ್ಮಿಕ ಸುಧಾರಣಾ ಚಳುವಳಿಗಳು ಭಾರತದ ಸಾಮಾಜಿಕ-ಸಾಂಸ್ಕೃತಿಕ ಬದುಕಿನ ಅವಿಭಾಜ್ಯ ಅಂಗಗಳಾಗಿವೆ.

1961ರ ಭಾರತದ ಜನಗಣತಿಯು ಏಳು ಧಾರ್ಮಿಕ ವರ್ಗಗಳನ್ನು ಪಟ್ಟಿಮಾಡಿದೆ: ಹಿಂದೂ, ಮುಸ್ಲಿಂ, ಕ್ರಿಶ್ಚಿಯನ್, ಜೈನ, ಬೌದ್ಧ, ಸಿಖ್ ಮತ್ತು ಇತರ ಮತ-ಧರ್ಮಗಳು. ಇವಲ್ಲದೇ 1931 ರ ಗಣತಿಯಲ್ಲಿ ಉಲ್ಲೇಖಿತವಾದ ಯಹೂದಿಗಳು, ಝೋರಾಸ್ಟ್ರಿಯ(ಪಾರ್ಸಿ)ನ್ನರು ಮತ್ತು ಬುಡಕಟ್ಟು ಜನಾಂಗಗಳಂತಹ ಇತರ ಧಾರ್ಮಿಕ ಗುಂಪುಗಳೂ ಇವೆ. ಭಾರತದಲ್ಲಿ ಧರ್ಮವು ಒಂದು ಸಂಕೀರ್ಣವಾದ ವಿದ್ಯಮಾನವಾಗಿದೆ. ವಿವಿಧ ಗುಂಪುಗಳಲ್ಲಿ ಕಂಡುಬರುವ ಸಂಪ್ರದಾಯವಾದಿ ಮತ್ತು ಪ್ರಗತಿಶೀಲ ಅಂಶಗಳು ಅಂತರ್-ಧರ್ಮೀಯ ವ್ಯತ್ಯಾಸವನ್ನು ಎತ್ತಿ ತೋರಿಸುತ್ತವೆ.

ಭಾರತದ ಇತಿಹಾಸದುದ್ದಕ್ಕೂ ಧಾರ್ಮಿಕ ಮತಾಂತರವು ವಿವಾದಾತ್ಮಕ ವಿಷಯವಾಗಿದೆ. ಸಮಕಾಲೀನ ಪರಿಸ್ಥಿತಿಯಲ್ಲೂ ಇದು ಇಂದಿಗೂ ಗಮನ ಸೆಳೆಯುತ್ತಿದೆ. ಇತ್ತೀಚಿನ ವರ್ಷಗಳಲ್ಲಿ ಬುಡಕಟ್ಟು ಜನಾಂಗದವರ ಧಾರ್ಮಿಕ ಮತಾಂತರವು ಗಣನೀಯ ವೈರತ್ವ ಮತ್ತು ಸಂಘರ್ಷವನ್ನು ಉಂಟುಮಾಡಿದೆ. ವರ್ಗ, ಭಾಷೆ ಮತ್ತು ಇನ್ನಿತರ ಆಂತರಿಕ ಭೇದಗಳನ್ನು ಅಳಿಸುವ ಮೂಲಕ ಧರ್ಮವು ಆಂತರಿಕ ಒಗ್ಗಟ್ಟಿಗೂ ಸಹ ಕಾರಣವಾಗಿದೆ. ಹೊರಗಿನಿಂದ ಬಂದ ಧರ್ಮಗಳಾದ ಇಸ್ಲಾಂ, ಕ್ರಿಶ್ಚಿಯನ್, ಝೋರಾಸ್ಟ್ರಿಯನ್ ಇತ್ಯಾದಿಗಳೂ ಸಹ ಭಾರತೀಯ ಸ್ವರೂಪವನ್ನು ಮೈಗೂಡಿಸಿಕೊಂಡಿವೆ. ಮುಖ್ಯ ಧರ್ಮವಾದ ಹಿಂದೂ ಧರ್ಮವು ತನ್ನೊಟ್ಟಿಗೆ ಇತರ ಧರ್ಮಗಳೂ ಬೆಳೆಯಲು ಅವಕಾಶ ಮಾಡಿಕೊಟ್ಟಿದೆ. ಇದು ಕೇವಲ ಇತರ ಧರ್ಮಗಳನ್ನು ಪ್ರಭಾವಿಸಿರುವುದಷ್ಟೇ ಅಲ್ಲ, ಸ್ವತಃ ಇತರೆ ಧರ್ಮಗಳ  ಪ್ರಭಾವಕ್ಕೊಳಗಾಗಿದೆ. ಭಕ್ತಿ ಚಳುವಳಿ ಮತ್ತು ಸೂಫಿ ಸಂಪ್ರದಾಯ ಇವು ಈ ಕೊಡು-ಕೊಳ್ಳುವಿಕೆಯ ಸನ್ನಿವೇಶಕ್ಕೆ ಸಾಕ್ಷಿಗಳಾಗಿವೆ.

ದೇಶವನ್ನು ಜಾತ್ಯತೀತ ಎಂದು ಪರಿಗಣಿಸುವ ಭಾರತದ ಸಂವಿಧಾನವು ಎಲ್ಲಾ ಧಾರ್ಮಿಕ ಗುಂಪುಗಳನ್ನೂ ಸಮಾನವಾಗಿ ಪರಿಗಣಿಸಿದೆ. ಇದು ಎಲ್ಲಾ ಧಾರ್ಮಿಕ ಗುಂಪುಗಳಿಗೂ ತಮ್ಮ ನಂಬಿಕೆಗಳು ಮತ್ತು ಆಚರಣೆಗಳನ್ನು ನಡೆಸಿಕೊಂಡು ಬರಲು ಸ್ವಾತಂತ್ರ್ಯವನ್ನು ನೀಡಿದೆ. ಶಿಕ್ಷಣ ಮತ್ತು ಅಭಿವೃದ್ಧಿಯ ರಾಷ್ಟ್ರೀಯ ನೀತಿ ಮತ್ತು ಯೋಜನೆಗಳಲ್ಲಿ ಜಾತ್ಯತೀತತೆಯು ಬೇರುಬಿಟ್ಟಿದೆ.

**ಜಾತಿ**

ಜಾತಿಯು ಸಾಮಾಜಿಕ ಸಂಬಂಧಗಳ ವ್ಯವಸ್ಥೆ. ಇದು ಸಗೋತ್ರ ವಿವಾಹ, ಶ್ರೇಣೀಕರಣ, ವೃತ್ತಿಯೊಡನೆ ಸಂಬಂಧ, ಮಡಿ-ಮೈಲಿಗೆಯ ಕಲ್ಪನೆಗಳು, ಮತ್ತು ಶಾಸ್ತ್ರಾಧಾರಿತ ಸ್ಥಾನಮಾನ ಇವುಗಳ ಆಧಾರದ ಮೇಲೆ ನಿಂತಿರುವ ಭಾರತೀಯ ಸಮಾಜದ ಪ್ರಮುಖ ಲಕ್ಷಣವಾಗಿದೆ. ಜಾತಿಯ ಸೈದ್ಧಾಂತಿಕ ಬೇರುಗಳಿರುವುದು ಹಿಂದೂ ಧರ್ಮದ ವರ್ಣ ವ್ಯವಸ್ಥೆಯಲ್ಲಿಯಾದರೂ ಇದು ಸರ್ವವ್ಯಾಪಿಯೂ ಸಂಕೀರ್ಣವೂ ಆದ ವಿದ್ಯಮಾನವಾಗಿದ್ದು ಸಮಾಜದ ಮೇಲೆ ಇಂದಿಗೂ ತನ್ನ ಹಿಡಿತವನ್ನು ಹೊಂದಿದೆ. ಕೆಲವೊಮ್ಮೆ ಧಾರ್ಮಿಕ ಅಡೆತಡೆಗಳನ್ನು ದಾಟಿ ಇದು ಭಾರತೀಯ ಸಮಾಜಕ್ಕೆ ಆಂತರಿಕ ವ್ಯವಸ್ಥೆಯನ್ನೂ ಸಾಮಾಜಿಕ ನೆಲೆಯನ್ನೂ ಒದಗಿಸಿದೆ. ಸಾಮಾಜಿಕ ಶ್ರಮ ವಿಭಜನೆಯಿಂದ ಉದಯಿಸಿರುವ ಈ ವ್ಯವಸ್ಥೆಯು ನಿರಂತರವಾಗಿ ಧಾರ್ಮಿಕ ಅನುಮೋದನೆಯನ್ನು ಗಳಿಸಿಕೊಂಡಿದೆ. ದೈನಂದಿನ ವಾಸ್ತವಗಳಿಗೆ ಸ್ಪಂದನಶೀಲವಾಗಿರುವ ಜಾತಿ ವ್ಯವಸ್ಥೆಯು ನಿರಂತರವಾಗಿ ಬದಲಾಗುತ್ತಲೂ ಇದೆ. ಚಾತುರ್ವರ್ಣಗಳು ಹಲವಾರು ಜಾತಿಗಳಿಗೆ ದಾರಿ ಮಾಡಿಕೊಟ್ಟಿವೆ. ಶಾಸ್ತ್ರಬದ್ಧತೆಯು (ಅಂದರೆ, ಜನ್ಮವನ್ನು ಆಧರಿಸಿದ ಜಾತಿ ಶ್ರೇಯಾಂಕ) ಜಾತಿ ವ್ಯವಸ್ಥೆಯನ್ನು ಸ್ವಲ್ಪ ಮಟ್ಟಿಗೆ ಅನಮ್ಯವಾಗಿಸಿದೆ. ಅದಾಗ್ಯೂ ಶಾಸ್ತ್ರಬದ್ಧತೆಯ

ಹೊರತಾಗಿಯೂ ಜಾತಿ ಎಂದೂ ಸ್ಥಾವರವಾಗಲಿಲ್ಲ. ಜಾತಿಯೊಳಗೆ ಸಾವಿರಾರು ಉಪಜಾತಿಗಳು, ಕುಲಗಳು ಮತ್ತು ಉಪಕುಲಗಳು ಇರುವುದು ಜಾತಿ ವ್ಯವಸ್ಥೆಯ ವೈವಿಧ್ಯ, ವಿಭಿನ್ನತೆ ಮತ್ತು ಬದಲಾವಣೆಗೆ ಸಾಕ್ಷಿಯಾಗಿದೆ.

ಹಲವಾರು ಸಮಾಜ ವಿಜ್ಞಾನಿಗಳು ಭಾರತೀಯ ಜಾತಿ ವ್ಯವಸ್ಥೆಯನ್ನು ವರ್ಗದ ದೃಷ್ಟಿಕೋನದಿಂದ ಕೂಡ ವಿಶ್ಲೇಷಿಸಿದ್ದಿದೆ. ಜಾತಿ ವ್ಯವಸ್ಥೆಯೊಳಗಿನ ಸಾಮಾಜಿಕ ಭಿನ್ನತೆಯನ್ನು ವಿಶ್ಲೇಷಿಸಲು ಜಾತಿ ಮತ್ತು ವರ್ಗ ಚರ್ಚೆಯು ಹುಟ್ಟಿಕೊಂಡಿದೆ. ಕೆಲವು ಸಮಾಜಶಾಸ್ತ್ರಜ್ಞರ ಪ್ರಕಾರ ಜಾತಿ ಮತ್ತು ವರ್ಗವು ಸಾಮಾಜಿಕ ಶ್ರೇಣೀಕರಣದ ಎರಡು ವಿಭಿನ್ನ ರೂಪಗಳಾಗಿವೆ; ಮತ್ತು ಜಾತಿಯಿಂದ (ಗುಂಪುಗಳ ಶ್ರೇಣೀಕರಣ) ವರ್ಗದ (ವ್ಯಕ್ತಿಗಳ ಶ್ರೇಣೀಕರಣ) ಕಡೆಗೆ ಸಾಗುವ ಬದಲಾವಣೆಗಳು ನಡೆಯುತ್ತಿವೆ. ಈ ಕೆಳಗಿನ ಅಂಶಗಳನ್ನು ಪರಿಗಣಿಸಬೇಕು:

ರೂಪಾಂತರ ಮತ್ತು ಬದಲಾವಣೆಗಳ ಹೊರತಾಗಿಯೂ ಒಂದು ಮತ ಸಿದ್ಧಾಂತವಾಗಿ, ಸಮಾಜ ವ್ಯವಸ್ಥೆಯಾಗಿ ಮತ್ತು ಆಚರಣೆಗಳ ಮೊತ್ತವಾಗಿ ಜಾತಿ ಪದ್ಧತಿಯು ಮುಂದುವರಿದಿದೆ.

ಜಾತಿ ವ್ಯವಸ್ಥೆಯು ಆರ್ಥಿಕ, ರಾಜಕೀಯ ಮತ್ತು ಸಾಮಾಜಿಕ ಪ್ರಾಬಲ್ಯ ಮತ್ತು ಸವಲತ್ತುಗಳು, ಅಧೀನತೆ ಮತ್ತು ಅಭಾವ ಇತ್ಯಾದಿಗಳಿಗೆ ಸಂಬಂಧಿಸಿದ ಸಮಸ್ಯೆಗಳನ್ನು ವಂಶಪಾರಂಪರ್ಯವಾಗಿ ಪಡೆಯುತ್ತದೆ.

ಭಾರತದ ಸಂವಿಧಾನವು ವಂಚಿತ ಜಾತಿಗಳ - ಮುಖ್ಯವಾಗಿ ಪರಿಶಿಷ್ಟ ಜಾತಿಗಳ (SC) ಮತ್ತು ಇತರ ಹಿಂದುಳಿದ ಜಾತಿಗಳ (OBC) - ರಕ್ಷಣೆಗಾಗಿ ವಿಶೇಷ ನಿಬಂಧನೆಗಳನ್ನು ಮಾಡಿದೆ.

**ಬುಡಕಟ್ಟು**

ಬುಡಕಟ್ಟು ಜನರು ಭಾರತದ ಇನ್ನೊಂದು ಪ್ರಮುಖ ಸಾಮಾಜಿಕ-ಸಾಂಸ್ಕೃತಿಕ ಗುಂಪುಗಳ ಗುಚ್ಛ, ಇವರು ಭಾರತದ ಜನಸಂಖ್ಯೆಯ (2001ರ ಗಣತಿ) ಶೇಕಡಾ 8 ಕ್ಕಿಂತ ಹೆಚ್ಚಿದ್ದಾರೆ. ಹೀಗಿದ್ದರೂ ಭಾರತದ ಬುಡಕಟ್ಟು ಗುಂಪುಗಳ ಪ್ರಸ್ತುತ ವರ್ಗೀಕರಣವನ್ನು ಗಮನಿಸಿದರೆ 'ಬುಡಕಟ್ಟು' ಪದವನ್ನು ವ್ಯಾಖ್ಯಾನಿಸುವುದು ಕಷ್ಟಕರ. ಇಂಪೀರಿಯಲ್ ಗೆಜೆಟಿಯರ್ ನಲ್ಲಿ 'ಬುಡಕಟ್ಟು' ಪದವನ್ನು 'ಸಾಮಾನ್ಯ ಹೆಸರು, ಸಾಮಾನ್ಯ ಉಪಭಾಷೆ ಹೊಂದಿರುವ, ಸಾಮಾನ್ಯ ಪ್ರದೇಶದಲ್ಲಿ ವಾಸವಾಗಿರುವ ಅಥವಾ ವಾಸವಾಗಿದ್ದೇವೆಂದು ಹೇಳಿಕೊಳ್ಳುವ, ಒಳಬಾಂಧವ್ಯವಿರುವ ಕುಟುಂಬಗಳ ಸಂಚಯ' ಎಂದು ವ್ಯಾಖ್ಯಾನಿಸಲಾಗಿದೆ.

ವಾಸ್ತವವಾಗಿ ಬುಡಕಟ್ಟು ಗುಂಪುಗಳಿಗೆ ಸಂಬಂಧಿಸಿದಂತೆ ಅವುಗಳನ್ನು ವ್ಯಾಖ್ಯಾನಿಸುವುದಕ್ಕಿಂತ ಬುಡಕಟ್ಟು ಗುಂಪುಗಳನ್ನು ಗುರುತಿಸುವುದು ಕಠಿಣವಾಗಿದೆ. ಈ ಗುಂಪುಗಳನ್ನು ಗುರುತಿಸುವಲ್ಲಿ ಶೈಕ್ಷಣಿಕ ಪರಿಗಣನೆಗಳಿಗೆ ಸರಿಯಾದ ಗಮನವನ್ನು ನೀಡಲಾಗಿಲ್ಲ (ಬೆಟ್ಟೆಯಿಲ್ಲೆ, 1986). ಸಿಂಗ್ (1994) ಅವರ ಪ್ರಕಾರ 'ಬುಡಕಟ್ಟು' ಎಂಬುದು ಭಾರತದಲ್ಲಿ ಆಡಳಿತಾತ್ಮಕ ಮತ್ತು ರಾಜಕೀಯ ಪರಿಕಲ್ಪನೆಯಾಗಿದೆ. ಬುಡಕಟ್ಟು ಗುಂಪುಗಳ ವರ್ಗೀಕರಣವನ್ನು ರಾಜ್ಯವಾರು ಮಾಡಲಾಗಿದೆಯಲ್ಲದೇ ಅವು ಏಕರೂಪವಾಗಿಲ್ಲ. ಒಂದು ರಾಜ್ಯದಲ್ಲಿ ಪರಿಶಿಷ್ಟ ಪಂಗಡಗಳೆಂದು ವರ್ಗೀಕರಿಸಲಾದ ಗುಂಪುಗಳನ್ನು ಇತರ ರಾಜ್ಯಗಳಲ್ಲಿ ಬುಡಕಟ್ಟುಗಳಾಗಿ ವರ್ಗೀಕರಿಸಿರದ ಪ್ರಕರಣಗಳಿವೆ. ಬುಡಕಟ್ಟು ಗುಂಪುಗಳು ತಮ್ಮ ಶೈಕ್ಷಣಿಕ ಸಾಧನೆಯ ವಿಷಯದಲ್ಲಿ ಬುಡಕಟ್ಟಲ್ಲದ ಗುಂಪುಗಳಿಗಿಂತ ಹೆಚ್ಚು ಹಿಂದುಳಿದಿವೆ. ಆದಿವಾಸಿಗಳಿಗೆ ಸಂಬಂಧಿಸಿದಂತೆ ಈ ಕೆಳಗಿನ ಸಮಸ್ಯೆಗಳನ್ನು ಗಮನಿಸಬೇಕಾಗಿದೆ:

ಬುಡಕಟ್ಟು ಗುಂಪುಗಳು ತಮ್ಮ ಸಾಂಸ್ಕೃತಿಕ ವೈಶಿಷ್ಟ್ಯಗಳ ವಿಷಯದಲ್ಲಿ ಇತರ ಹಿಂದುಳಿದ ಗುಂಪುಗಳಿಗಿಂತ ಭಿನ್ನವಾಗಿವೆ.

ಬುಡಕಟ್ಟು ಜನರ ಗುಂಪುಗಳು ಸ್ವತಃ ಹೆಚ್ಚು ವೈವಿಧ್ಯಮಯವಾಗಿವೆ. ಅಂಡಮಾನ್ ದ್ವೀಪಗಳಲ್ಲಿ ನೆಲೆಗೊಂಡಿರುವ ಅತ್ಯಂತ ಪ್ರಾಚೀನ ಪ್ರತ್ಯೇಕ ಬುಡಕಟ್ಟು ಗುಂಪುಗಳಿಂದ ಹಿಡಿದು ರಾಜಸ್ಥಾನದ ಮೀನಾ ಮುಂತಾದ ಆಧುನಿಕ ಅಭಿವೃದ್ಧಿ ಹೊಂದಿದ ಬುಡಕಟ್ಟು ಗುಂಪುಗಳವರೆಗೆ ಬುಡಕಟ್ಟುತನದ ಮಟ್ಟದಲ್ಲಿ ಸಾಕಷ್ಟು ವ್ಯತ್ಯಾಸವಿದೆ.

ಗಾತ್ರ, ಪ್ರಾದೇಶಿಕತೆ, ಜನಾಂಗೀಯ ಲಕ್ಷಣಗಳು, ವಿವಾಹ ಮತ್ತು ಬಂಧುತ್ವದ ವಿನ್ಯಾಸಗಳು, ಭಾಷೆಗಳು/ ಉಪಭಾಷೆಗಳು, ಆರ್ಥಿಕತೆ, ಧಾರ್ಮಿಕ ನಂಬಿಕೆಗಳು, ಅಭಿವೃದ್ಧಿ ಮತ್ತು ಶೈಕ್ಷಣಿಕ ಸಾಧನೆ ಇತ್ಯಾದಿಗಳಲ್ಲಿ ಬುಡಕಟ್ಟು ಗುಂಪುಗಳು ಮತ್ತಷ್ಟು ಭಿನ್ನವಾಗಿವೆ. ಸ್ಥಳೀಯ ಸಮುದಾಯವಾಗಿರುವ ಬುಡಕಟ್ಟು ಜನಾಂಗದವರು ತಮ್ಮ ಗುರುತನ್ನು ರಾಷ್ಟ್ರೀಯ ಮಟ್ಟಕ್ಕಿಂತ ಹೆಚ್ಚಾಗಿ ಪ್ರಾದೇಶಿಕ ಮತ್ತು ಸ್ಥಳೀಯ ಮಟ್ಟದಲ್ಲಿ ಗ್ರಹಿಸುತ್ತಾರೆ. ಬುಡಕಟ್ಟು ಗುಂಪುಗಳು ಎದುರಿಸುತ್ತಿರುವ ಸಮಸ್ಯೆಗಳು ಪ್ರದೇಶದಿಂದ ಪ್ರದೇಶಕ್ಕೆ, ರಾಜ್ಯದಿಂದ ರಾಜ್ಯಕ್ಕೆ ಮತ್ತು ಒಂದು ಬುಡಕಟ್ಟು ಗುಂಪಿನಿಂದ ಇನ್ನೊಂದಕ್ಕೆ ಬದಲಾಗುತ್ತವೆ.

**ಲಿಂಗತ್ವ**

ಲಿಂಗತ್ವವು ಸ್ತ್ರೀ ಪುರುಷರ ನಡುವಿನ ಸಾಮಾಜಿಕ-ಜೈವಿಕ ವ್ಯತ್ಯಾಸದ ಒಂದು ರೂಪವಾಗಿದೆ. ಲಿಂಗತ್ವ ವ್ಯತ್ಯಾಸವು ಸಾಮಾಜಿಕವಾಗಿ ನಿರ್ಮಿಸಲಾದ ವ್ಯತಿರಿಕ್ತ ಗುಣಲಕ್ಷಣಗಳನ್ನು ಸ್ತ್ರೀ ಸಹಜ ಮತ್ತು ಪುರುಷ ಸಹಜ ಎಂದು ಹಣೆಪಟ್ಟಿ ಹಚ್ಚಿದ್ದರಿಂದ ಸಿದ್ಧವಾಗಿದ್ದು, ಪರಿಕಲ್ಪನಾತ್ಮಕವಾಗಿ 'ಲಿಂಗತ್ವ' (gender) ವು 'ಲಿಂಗ (sex) ಕ್ಕಿಂತ ಭಿನ್ನ. ಲಿಂಗವು ಪ್ರಧಾನವಾಗಿ ಪುರುಷ ಮತ್ತು ಸ್ತ್ರೀಯರ ನಡುವಿನ ಜೈವಿಕ/ಜನಸಂಖ್ಯಾ ಗುಣಲಕ್ಷಣಗಳ ದ್ವಿರೂಪದ ವಿತರಣೆಯನ್ನು ಸೂಚಿಸುತ್ತದೆ. ಲಿಂಗತ್ವ ವ್ಯತ್ಯಾಸಗಳ ಸಂದರ್ಭದಲ್ಲಿ ಚಾರಿತ್ರಿಕವಾಗಿ ನಿಯಂತ್ರಿತವಾದ ಸಾಮಾಜಿಕ-ಜೈವಿಕ ವ್ಯತ್ಯಾಸಗಳು ಸಾಮಾಜಿಕ ಸಂಸ್ಥೆಗಳ ಭಾಗವಾಗಿ ಅಂಗೀಕರಿಸಲ್ಪಟ್ಟವು. ಹೀಗಾಗಿ ಅಧಿಕಾರ ಮತ್ತು ನಿಯಂತ್ರಣದ ಅಂಶಗಳು ಲಿಂಗತ್ವ ವ್ಯತ್ಯಾಸದಲ್ಲಿ ಅಂತರ್ಗತವಾಗಿವೆ. ಲಿಂಗ ಮತ್ತು ಲಿಂಗತ್ವ ವ್ಯತ್ಯಾಸಗಳೆರಡೂ ಸಾರ್ವತ್ರಿಕವಾಗಿದ್ದರೂ, ವ್ಯತ್ಯಾಸದ ಸ್ವರೂಪ ಮತ್ತು ಮಟ್ಟಗಳು ಒಂದು ಸಾಮಾಜಿಕ ಗುಂಪಿನಿಂದ ಇನ್ನೊಂದಕ್ಕೆ ಬದಲಾಗುತ್ತವೆ.

ಶಿಕ್ಷಣದಲ್ಲಿ ಲಿಂಗತ್ವದ ಅಂತರ ಹೆಚ್ಚಿರುವುದು ಭಾರತದ ಶೈಕ್ಷಣಿಕ ಬೆಳವಣಿಗೆಯ ಲಕ್ಷಣವಾಗಿದೆ. ಪುರುಷರ ಸಾಕ್ಷರತೆಯು 75-85 ಪ್ರತಿಶತದಷ್ಟಿದ್ದರೆ ಮಹಿಳೆಯರ ಸಾಕ್ಷರತೆ 54-1 ಪ್ರತಿಶತದಷ್ಟು (2001 ರ ಜನಗಣತಿ) ಎನ್ನುವುದು ನಿರಾಶಾದಾಯಕ ಚಿತ್ರಣವಾಗಿದೆ. ಶಿಕ್ಷಣದ ಎಲ್ಲಾ ಹಂತದಲ್ಲೂ ಲಿಂಗತ್ವ ಅಸಮಾನತೆ ಕಂಡುಬರುತ್ತದೆ. ಉದಾಹರಣೆಗೆ, ಪ್ರಾಥಮಿಕ ಶಿಕ್ಷಣದ ದಾಖಲಾತಿ ಹಂತದಲ್ಲಿ ಲಿಂಗತ್ವ ಅಂತರವು ಶೇಕಡಾ 22 ರಷ್ಟಿತ್ತು (ಹಕ್ ಮತ್ತು ಹಕ್, 1998).

ಭಾರತೀಯ ಸಮಾಜದಲ್ಲಿ ಮಹಿಳೆಯರಿಗಿರುವ ಪ್ರತಿಕೂಲ ಪರಿಸ್ಥಿತಿಯ ದೃಷ್ಟಿಯಿಂದ ಶಿಕ್ಷಣದಲ್ಲಿನ ಲಿಂಗತ್ವ ಅಂತರವನ್ನು ಅರ್ಥಮಾಡಿಕೊಳ್ಳುವುದು ಅಗತ್ಯ. ಭಾರತೀಯ ಮಹಿಳೆಯರು ತಮ್ಮ ಸಾಮಾಜಿಕ ಜೀವನದ

ಬಹುತೇಕ ಎಲ್ಲಾ ಕ್ಷೇತ್ರಗಳಲ್ಲೂ ಪೂರ್ವಗ್ರಹವನ್ನು ಎದುರಿಸುತ್ತಾರೆ. ಈ ಪೂರ್ವಗ್ರಹದ ಸ್ವರೂಪ ಮತ್ತು ತೀವ್ರತೆಯು ವಿಭಿನ್ನ ಸಾಮಾಜಿಕ ಗುಂಪುಗಳಲ್ಲಿ ಬದಲಾಗಬಹುದು. ಲಿಂಗತ್ವ ಅನನುಕೂಲತೆಯು ವರ್ಗ, ಜಾತಿ, ಧರ್ಮ ಮತ್ತು ಇತರ ಅನನುಕೂಲತೆಗಳೊಂದಿಗೆ ಕೂಡಿಕೊಂಡಾಗ ಸಮಸ್ಯೆಯು ಮತ್ತಷ್ಟು ತೀವ್ರಗೊಳ್ಳುತ್ತದೆ. ಉದಾಹರಣೆಗೆ, ಪ್ರಾಥಮಿಕ ಶಾಲಾ ಹಂತದಲ್ಲಿ ವಿದ್ಯಾಭ್ಯಾಸವನ್ನು ಬಿಡುವವರ ಪ್ರಮಾಣವು ಗ್ರಾಮೀಣ ಪರಿಶಿಷ್ಟ ಪಂಗಡದ ಹೆಣ್ಣು ಮಕ್ಕಳಲ್ಲಿ ಅತ್ಯಧಿಕವಾಗಿದೆ (NSS, 50ನೇ ಸುತ್ತು, 1993-94).

ಹೀಗೆ ಅಸಮಾನತೆ ಮತ್ತು ಅನನುಕೂಲತೆಯ ಸಮಸ್ಯೆಗಳು ಸಾಮಾಜಿಕ ತಾರತಮ್ಯದಿಂದ ಉಂಟಾಗುವ ಸಾಮಾಜಿಕ ವೈವಿಧ್ಯತೆಯ ಲಕ್ಷಣವಾಗಿವೆ. ಕೆಲವೊಮ್ಮೆ ನಿರ್ದಿಷ್ಟ ಸ್ಥಳದಲ್ಲೋ ಪ್ರದೇಶದಲ್ಲೋ ವಂಚಿತ ಗುಂಪುಗಳ ಸಾಂದ್ರತೆ ಇದ್ದರೆ ಈ ಗುಂಪು ಅಸಮಾನತೆಯು ಪ್ರಾದೇಶಿಕ ಅಸಮತೋಲನದಲ್ಲೂ ಪ್ರತಿಫಲಿಸುತ್ತದೆ. ಯಾವುದೇ 'ಪ್ರದೇಶ'ವೂ ಸಾಮಾಜಿಕ ವರ್ಗವಲ್ಲವಾದರೂ ಅದು ಅಲ್ಲಿ ವಾಸವಾಗಿರುವ ಕೆಲವು ಸಾಮಾಜಿಕ ಗುಂಪುಗಳ ಕಾರಣದಿಂದ ಸಮಾಜೋ-ಆರ್ಥಿಕ ಸ್ಥಾನಮಾನಗಳ ಒಂದು ವಿನ್ಯಾಸವನ್ನು ತೋರಿಸುತ್ತದೆ. ಉದಾಹರಣೆಗೆ ಉತ್ತರ ಮತ್ತು ಪೂರ್ವದ ಪ್ರದೇಶಗಳು ವಂಚಿತ ಗುಂಪುಗಳ ಪ್ರಮಾಣ ಹೆಚ್ಚಿರುವುದರಿಂದ ಶೈಕ್ಷಣಿಕ ಮತ್ತು ಆರ್ಥಿಕ ಅಭಿವೃದ್ಧಿಯಲ್ಲಿ ಹಿಂದುಳಿದಿವೆ. ವಿವಿಧ ಗುಂಪುಗಳ ಒಳಗಿನ ಮತ್ತು ಅವುಗಳ ನಡುವಿನ ಅಸಮಾನತೆಗಳನ್ನು ವಿವಿಧ ಕೋನಗಳಿಂದ ಅಧ್ಯಯನ ಮಾಡಬೇಕಾಗುತ್ತದೆ. ಕೆಳಗಿನ ವಿಭಾಗವು ಶಿಕ್ಷಣದ ಮೇಲೆ ಸಾಮಾಜಿಕ ವೈವಿಧ್ಯತೆಯ ಪ್ರಭಾವದ ಕುರಿತಾಗಿ ಇದೆ.

### 1.4 ಶಿಕ್ಷಣದ ಮೇಲೆ ಸಾಮಾಜಿಕ ವೈವಿಧ್ಯತೆಯ ಪ್ರಭಾವ

ಮೇಲಿನ ವಿಭಾಗಗಳಲ್ಲಿ ನಾವು ಸಾಮಾಜಿಕ ವೈವಿಧ್ಯತೆಯ ಅರ್ಥ, ಸ್ವರೂಪ ಮತ್ತು ವಿಧಗಳನ್ನು ಚರ್ಚಿಸಿದೆವು. ಇನ್ನು 'ಈ ಸಾಮಾಜಿಕ ವೈವಿಧ್ಯತೆಯು ಶಿಕ್ಷಣದ ಮೇಲೆ ಬೀರುವ ಪ್ರಮುಖ ಪರಿಣಾಮಗಳು ಯಾವುವು?' ಅಥವಾ 'ತುಂಬ ವೈವಿಧ್ಯತೆಗಳಿರುವ ಸಮಾಜದಲ್ಲಿ ಶಿಕ್ಷಣವು ಯಾವ ಪಾತ್ರವನ್ನು ವಹಿಸಬಹುದು?' ಎಂಬ ಪ್ರಶ್ನೆಯನ್ನು ಚರ್ಚಿಸಬೇಕಾಗಿದೆ. ಅಂದರೆ, ಶಿಕ್ಷಣ ಮತ್ತು ಸಾಮಾಜಿಕ ವೈವಿಧ್ಯತೆಯ ನಡುವಿನ ಸಂಬಂಧಗಳನ್ನು ಪರಿಶೀಲಿಸಬೇಕಿದೆ. ಈ ವಿಭಾಗದಲ್ಲಿ ನಾವು ಲಭ್ಯತೆ, ಭಾಗವಹಿಸುವಿಕೆ ಮತ್ತು ಸಾಧನೆ ಈ ದೃಷ್ಟಿಗಳಿಂದ ಶಿಕ್ಷಣದ ಮೇಲೆ ಸಾಮಾಜಿಕ ವೈವಿಧ್ಯತೆಯ ಪ್ರಭಾವವನ್ನು ವಿಶ್ಲೇಷಿಸಿದ್ದೇವೆ.

#### 1.4.1 ವ್ಯತ್ಯಾಸಾತ್ಮಕ ಅವಕಾಶ; ತಲುಪದವರನ್ನು ತಲುಪುವುದು

ಎಲ್ಲರಿಗೂ ಶಿಕ್ಷಣವನ್ನು ಒದಗಿಸುವ ಸಾಂವಿಧಾನಿಕ ಬದ್ಧತೆಗೆ ಅನುಗುಣವಾಗಿ ಸ್ವಾತಂತ್ರ್ಯೋತ್ತರ ಕಾಲದಲ್ಲಿ ಶೈಕ್ಷಣಿಕ ಸೌಲಭ್ಯವನ್ನು ಗಣನೀಯವಾಗಿ ವಿಸ್ತರಿಸಲಾಗಿದೆ. ಆದರೂ ಗುಂಪು ಮತ್ತು ಪ್ರಾದೇಶಿಕ ಅಸಮಾನತೆಗಳು ನಿರಂತರವಾಗಿ ಉಳಿದುಕೊಂಡಿರುವುದು ಈ ವಿಷಯದಲ್ಲಿ ಪ್ರಮುಖ ಅಡಚಣೆಯಾಗಿದೆ. ಶಿಕ್ಷಣದ ಲಭ್ಯತೆಯೇ ಇಲ್ಲದಿರುವ ವಸತಿ ಪ್ರದೇಶಗಳು ಇನ್ನೂ ದೊಡ್ಡ ಸಂಖ್ಯೆಯಲ್ಲೇ ಇವೆ. ಈ ಪ್ರದೇಶಗಳೆಲ್ಲ ಹೆಚ್ಚಾಗಿ ವಂಚಿತ ಸಮುದಾಯಗಳಿಗೆ ಸೇರಿದವು. ಇಲ್ಲಿ ಬಹುತೇಕ ಮಕ್ಕಳು ಶಾಲೆಯನ್ನೇ ಕಂಡಿಲ್ಲ. ಮೇಲಾಗಿ ಸಾಮಾಜಿಕವಾಗಿಯೂ ಶಾಲೆಗಳು ಲಭ್ಯವಾಗಿಲ್ಲ. ಅಂದರೆ, ಶಾಲೆಗಳಿರುವ ವಸತಿ ಪ್ರದೇಶಗಳಲ್ಲೂ ಸಹ ಪರಿಶಿಷ್ಟ ವರ್ಗ/ಜನಾಂಗ ಮತ್ತು ಅಲ್ಪಸಂಖ್ಯಾತ ಸಮುದಾಯಗಳಿಗೆ ಸೇರಿದ ಮಕ್ಕಳು ದಾಖಲಾತಿ ಪಡೆಯಲು ಸಾಧ್ಯವಾಗುತ್ತಿಲ್ಲ. ಇಲ್ಲವೇ ಶಾಲೆಗೆ

ಹೋಗಲಾಗುತ್ತಿಲ್ಲ. ಹೀಗಾಗಿ ಅಸಮರ್ಪಕ ಲಭ್ಯತೆಯ ಸಮಸ್ಯೆಯನ್ನು ಸಮುದಾಯಗಳ ಆಧಾರದಲ್ಲೇ ಅಧ್ಯಯನ ಮಾಡುವುದು ಅಗತ್ಯ.

ವಿಭಿನ್ನ ಸಾಮಾಜಿಕ ಮತ್ತು ಆರ್ಥಿಕ ಹಿನ್ನೆಲೆಯ ಮಕ್ಕಳು ಬೇರೆ ಬೇರೆ ಬಗೆಯ ಶಾಲೆಗಳಿಗೇ ಹೋಗುತ್ತಾರೆ. ಉನ್ನತ ಸಮಾಜೋ-ಆರ್ಥಿಕ ಸಮುದಾಯಗಳಿಗೆ ಸೇರಿದ ಮಕ್ಕಳು ಗುಣಮಟ್ಟದ ಶಾಲೆಗಳಿಗೆ (ಅಂದರೆ ಮೂಲಸೌಕರ್ಯ ಮತ್ತು ಸಮರ್ಥ ಶಿಕ್ಷಕರಿರುವ ಶಾಲೆಗಳು) ಸೇರಿದರೆ ವಂಚಿತ ಸಮುದಾಯಗಳಿಗೆ ಸೇರಿದ ಮಕ್ಕಳು ಕಳಪೆ ಗುಣಮಟ್ಟದ ಶಾಲೆಗಳಿಗೆ (ಅಂದರೆ ಕಳಪೆ ತರಬೇತಿ ಪಡೆದ ಏಕಶಿಕ್ಷಕರಿರುವ ಆದರೆ ಬಹುವರ್ಗಗಳಿರುವ ಶಾಲೆಗಳು) ಹೋಗುತ್ತಾರೆ. ಹೀಗಾಗಿ ವಂಚಿತ ಪ್ರದೇಶಗಳಲ್ಲಿರುವ ವಂಚಿತ ಸಮುದಾಯಗಳಿಗೆ ಶೈಕ್ಷಣಿಕ ಸೌಲಭ್ಯಗಳು ಲಭ್ಯವಾಗುವಂತೆ ತೀವ್ರ ಪ್ರಯತ್ನಗಳನ್ನು ನಡೆಸುವುದು ಅಗತ್ಯ. ಇದರ ಅರ್ಥವೇನೆಂದರೆ ಹುಡುಗಿಯರು, ಪರಿಶಿಷ್ಟ ಜಾತಿ/ವರ್ಗ ಮತ್ತು ಅಲ್ಪಸಂಖ್ಯಾತ ಸಮುದಾಯಗಳ ಮಕ್ಕಳು - ಇಂತಹ ಅವಕಾಶ ವಂಚಿತರಿಗೆ ವಿಶೇಷ ಅವಕಾಶವನ್ನು ಕಲ್ಪಿಸುವುದು. ಇದಲ್ಲದೇ, ನಾವು ಕಟ್ಟುನಿಟ್ಟಾದ ಸಾಂಪ್ರದಾಯಿಕ ಶಿಕ್ಷಣ ವ್ಯವಸ್ಥೆಯ ಆಚೆಯೂ ಹೋಗಿ ಶಾಲೆಯನ್ನು ಸೇರದ ಅಥವಾ ಶಾಲೆಗೆ ದಾಖಲಾಗಿಯೇ ಇರದ ಮಕ್ಕಳಿಗೆ ಅನೌಪಚಾರಿಕ ಅಥವಾ ಪರ್ಯಾಯ ಶಿಕ್ಷಣದ ಅವಕಾಶಗಳನ್ನು ಸೃಷ್ಟಿಸುವುದೂ ಅಗತ್ಯವಾಗಿದೆ. ದೂರದ ಮೂಲೆಯಲ್ಲಿರುವ ಮತ್ತು ತಲುಪಲು ಕಷ್ಟಸಾಧ್ಯವಾದ ಪ್ರದೇಶಗಳು ಮತ್ತು ಸಮುದಾಯಗಳನ್ನು ಒಳಗೊಳ್ಳಲು ಸರಕಾರವು ಎರಡು ತಂತ್ರಗಳನ್ನು ಅಳವಡಿಸಿಕೊಂಡಿದೆ: (ಅ) ಸಣ್ಣ ವಸತಿ ಪ್ರದೇಶಗಳಲ್ಲಿ ಶಾಲೆಗಳನ್ನು ತೆರೆಯಲು ಇರುವ ನಿಬಂಧನೆಗಳನ್ನು (ಜನಸಂಖ್ಯೆ ಮತ್ತು ದೂರಕ್ಕೆ ಸಂಬಂಧಿಸಿ) ಕಡಿಮೆ ಮಾಡುವುದು, ಮತ್ತು (ಬ) ನಿರ್ದಿಷ್ಟ ಗುಂಪುಗಳ ಅಗತ್ಯಗಳಿಗೆ ಅನುಗುಣವಾಗಿ ವಿವಿಧ ಪರ್ಯಾಯ ಶಿಕ್ಷಣ ಕೇಂದ್ರಗಳನ್ನು ತೆರೆಯುವುದು.

### 1.4.2 ಅಸಮಾನ ಭಾಗವಹಿಸುವಿಕೆ ಮತ್ತು ಪೂರ್ಣಗೊಳಿಸುವಿಕೆ

ಮಕ್ಕಳಿಗೆ ಶಾಲೆಗೆ ಪ್ರವೇಶ ದೊರಕುವುದು ಶಾಲಾ ಶಿಕ್ಷಣದಲ್ಲಿ ಅವರ ಭಾಗವಹಿಸುವಿಕೆಯನ್ನು ಖಚಿತಪಡಿಸುವುದಿಲ್ಲ. ಪ್ರಾಥಮಿಕ ಮತ್ತು ಪ್ರೌಢಶಾಲಾ ಶಿಕ್ಷಣವನ್ನು ಪೂರ್ತಿಯಾಗಿ ಮುಗಿಸಲು ಮಕ್ಕಳು ಅಷ್ಟು ವರ್ಷ ಶಾಲೆಯಲ್ಲಿರಬೇಕಾಗುತ್ತದೆ. “ಭಾಗವಹಿಸುವಿಕೆ” ಎಂದರೆ ಮಕ್ಕಳ ದಾಖಲಾತಿ, ಹಾಜರಾತಿ ಮತ್ತು ಶಾಲಾ ಶಿಕ್ಷಣವನ್ನು ಯಶಸ್ವಿಯಾಗಿ ಮುಗಿಸುವುದು - ಇವೆಲ್ಲವನ್ನೂ ಒಳಗೊಳ್ಳುತ್ತದೆ. ಲಭ್ಯತೆಯಲ್ಲಿ ಇರುವ ವ್ಯತ್ಯಾಸ ಸಮಸ್ಯೆಯು ಈ ಅಸಮ ಭಾಗವಹಿಸುವಿಕೆಯಿಂದ ಇನ್ನಷ್ಟು ಹೆಚ್ಚಾಗುತ್ತದೆ. ದಾಖಲಾತಿ ಪ್ರಮಾಣದಲ್ಲಿ ಸುಧಾರಣೆಯಾಗಿದ್ದರೂ ಶಾಲೆ ಬಿಡುವವರ ಸಂಖ್ಯೆ ಹೆಚ್ಚುತ್ತಲೇ ಇದೆ. ಅದರಲ್ಲೂ ಹುಡುಗಿಯರು, ಪರಿಶಿಷ್ಟ ಜಾತಿಯವರು, ಪರಿಶಿಷ್ಟ ಪಂಗಡದವರು - ಇವರಲ್ಲೇ ಶಾಲೆ ಬಿಡುವವರ ಸಂಖ್ಯೆ ಹೆಚ್ಚು. ಪ್ರಾದೇಶಿಕ ತಾರತಮ್ಯದಲ್ಲೂ ಸಹಿತ ಸಮುದಾಯಗಳ ನಡುವಿನ ತಾರತಮ್ಯವು ಪ್ರತಿಫಲಿಸಲ್ಪಡುತ್ತದೆ. ಸರಕಾರದ ಮುಂದೆ ಇರುವ ತಕ್ಷಣದ ಸವಾಲೆಂದರೆ ನಿರ್ದಿಷ್ಟ ಕಾಲಮಿತಿಯಲ್ಲಿ ದಾಖಲಾತಿ ಮತ್ತು ಶಾಲಾ ಮುಂದುವರಿಕೆಯಲ್ಲಿ ಕಂಡುಬರುವ ಲಿಂಗತ್ವ ಮತ್ತು ಸಾಮಾಜಿಕ ಅಂತರಗಳನ್ನು ಇಲ್ಲವಾಗಿಸುವುದು. ಇದು ಭಾರತ ಸಂವಿಧಾನದ 46ನೇ ವಿಧಿಯಲ್ಲಿ ಅಭಿವ್ಯಕ್ತವಾದ ಕಾಳಜಿಗಳಿಗೆ ಕೂಡ ಅನುಗುಣವಾಗಿದೆ:

"ಸರಕಾರವು ದುರ್ಬಲ ವರ್ಗಗಳ - ನಿರ್ದಿಷ್ಟವಾಗಿ ಪರಿಶಿಷ್ಟ ಜಾತಿ ಮತ್ತು ಪಂಗಡಗಳ ಜನರ ಶೈಕ್ಷಣಿಕ ಮತ್ತು ಆರ್ಥಿಕ ಹಿತಾಸಕ್ತಿಯನ್ನು ವಿಶೇಷ ಕಾಳಜಿವಹಿಸಿ ಉತ್ತೇಜಿಸಬೇಕು ಮತ್ತು ಸಾಮಾಜಿಕ ಅನ್ಯಾಯ ಹಾಗೂ ಎಲ್ಲ ಬಗೆಯ ಶೋಷಣೆಯಿಂದ ಅವರನ್ನು ರಕ್ಷಿಸಬೇಕು".

ಸಾಂವಿಧಾನಿಕ ಬದ್ಧತೆಯನ್ನು ಪೂರೈಸಲು, ಯಾವೆಲ್ಲ ಸಮುದಾಯಗಳಿಗೆ ಅಗತ್ಯವಿದೆಯೋ ಆ ಎಲ್ಲಾ ಸಮುದಾಯಗಳಿಗೂ ವಿಶೇಷ ಶೈಕ್ಷಣಿಕ ಸಹಾಯವನ್ನು ಒದಗಿಸಬೇಕಾಗುತ್ತದೆ. ಶಾಲೆಯಲ್ಲಿ ಮಕ್ಕಳ ಭಾಗವಹಿಸುವಿಕೆಯನ್ನು ಹೆಚ್ಚಿಸಲು ಮಧ್ಯಾಹ್ನದ ಊಟ ಮತ್ತು ಹಾಜರಾತಿ ಭತ್ಯೆ, ಉಚಿತ ಪಠ್ಯಪುಸ್ತಕಗಳು, ಸಮವಸ್ತ್ರಗಳಂತಹ ಇತರ ಕ್ರಮಗಳ ಮೂಲಕ ಪ್ರೋತ್ಸಾಹ ನೀಡುವುದು, ಆರಂಭಿಕ ಬಾಲ್ಯದ ಆರೈಕೆ ಮತ್ತು ಶಿಕ್ಷಣ, ಆಶ್ರಮ ಶಾಲೆಗಳು - ಇಂತಹ ಹಲವಾರು ಕಾರ್ಯಕ್ರಮಗಳನ್ನು ಪ್ರಾರಂಭಿಸಲಾಗಿದೆ.

**1.4.3 ಸಾಧನೆ: ಶಿಕ್ಷಣದಲ್ಲಿ ಸಮಾನ ಗುಣಮಟ್ಟ**

ಭಾರತದಲ್ಲಿ ಶಾಲಾ ಶಿಕ್ಷಣ ವ್ಯವಸ್ಥೆಯು ಹಲವು ಪಟ್ಟು ವರ್ಧಿಸಿದೆ. ಸಹಜವಾಗಿಯೇ ಇದನ್ನು ಸಮರ್ಥವಾಗಿ ನಿರ್ವಹಿಸುವುದು ಒಂದು ದೊಡ್ಡ ಸವಾಲು. ಜೊತೆಗೆ ಸಂಪನ್ಮೂಲಗಳ ಕ್ರೋಢೀಕರಣ ಮತ್ತು ಉತ್ತಮ ಗುಣಮಟ್ಟವನ್ನು ಕಾಪಾಡಿಕೊಳ್ಳುವುದೂ ಸಹ ಸಮಸ್ಯೆಯೇ. ಶಿಕ್ಷಣದಲ್ಲಿ ಗುಣಮಟ್ಟದ ಸುಧಾರಣೆ ತಟ್ಟನೆ ಆಗಿಬಿಡುವುದಿಲ್ಲ. ಭಾರತದಂತಹ ವೈವಿಧ್ಯಮಯ ದೇಶದಲ್ಲಿ ಅಭಿವೃದ್ಧಿಯ ವಿವಿಧ ಹಂತಗಳಲ್ಲಿ ಇರುವ ಎಲ್ಲಾ ಸಮುದಾಯಗಳಿಗೆ ಗುಣಮಟ್ಟದ ಶಿಕ್ಷಣವನ್ನು ಒದಗಿಸುವುದು ಶಿಕ್ಷಣ ವ್ಯವಸ್ಥೆಯ ಪ್ರಮುಖ ಸವಾಲು.

ಸೈದ್ಧಾಂತಿಕ ನೆಲೆಯಲ್ಲಿ ಶಿಕ್ಷಣದಲ್ಲಿ ಗುಣಮಟ್ಟ ಮತ್ತು ಸಮಾನತೆಯ ನಡುವೆ ಒಳಸಂಘರ್ಷವಿದೆ. *ಗುಣಮಟ್ಟವು ಅಸಮಾನತೆಯನ್ನುಂಟು ಮಾಡಿದರೆ ಸಮಾನತೆಯು ಗುಣಮಟ್ಟಕ್ಕೆ ಅಡ್ಡಿಯುಂಟುಮಾಡುತ್ತದೆ.* 'ಗುಣಮಟ್ಟ' ಪದದ ಅರ್ಥವೇ ಉತ್ಕೃಷ್ಟತೆ. ಶಿಕ್ಷಣದಲ್ಲಿ ಉತ್ಕೃಷ್ಟತೆಗೆ ಹೆಚ್ಚಿನ ಒತ್ತು ನೀಡುವುದು ತಾರತಮ್ಯಕ್ಕೆ ಕಾರಣವಾಗಬಹುದು. ಏಕೆಂದರೆ ಇದುವರೆಗೂ ಆಧುನಿಕ ಶಿಕ್ಷಣಕ್ಕೆ ತೆರೆದುಕೊಂಡಿರದ ವಿವಿಧ ಹಿಂದುಳಿದ ಸಮುದಾಯಗಳ ಮಕ್ಕಳು ಇಂತಹ ಶಿಕ್ಷಣ ವ್ಯವಸ್ಥೆಯು ಅಪೇಕ್ಷಿಸುವ ಮಟ್ಟವನ್ನು ತಲುಪಲು ಕಷ್ಟಪಡಬೇಕಾಗುತ್ತದೆ. ಅನನುಕೂಲಿತ ಸಮುದಾಯಗಳಿಂದ ಬರುವ ಮಕ್ಕಳು ಶಾಲೆ ಬಿಡುವ ಪ್ರಮಾಣ ಹೆಚ್ಚಿಗೆ ಇರುವುದಕ್ಕೆ ಪಠ್ಯಕ್ರಮದ ಮಿತಿಮೀರಿದ ಭಾರದಿಂದ ಉಂಟಾಗುವ ಕಲಿಕೆಯ ತೊಂದರೆಗಳೂ ಸಹ ಕಾರಣವಾಗಿವೆ. ಎಲ್ಲಾ ವಿದ್ಯಾರ್ಥಿ ಗುಂಪುಗಳನ್ನೂ ಒಂದೇ ಮಟ್ಟದವರೆಂದು ಪರಿಗಣಿಸುವುದು ಈ ಸಂದರ್ಭದಲ್ಲಿ ಸೂಕ್ತವಾದ ತಂತ್ರ ಆಗಲಾರದು. ಇದಕ್ಕೆ ಬದಲಾಗಿ ಅನನುಕೂಲಿತ ಸಮುದಾಯಗಳ ಮಕ್ಕಳನ್ನು ಗಮನದಲ್ಲಿಟ್ಟುಕೊಂಡು ಎಲ್ಲಾ ಮಕ್ಕಳಿಗೂ ಕನಿಷ್ಠ ಶೈಕ್ಷಣಿಕ ಗುಣಮಟ್ಟವನ್ನು ನಿಗದಿಪಡಿಸಿದರೆ ಅದು ಸುಶಿಕ್ಷಿತ ಕುಟುಂಬಕ್ಕೆ ಸೇರಿದ ಮಕ್ಕಳ ಹಿತಾಸಕ್ತಿಗೆ ಪ್ರತಿಕೂಲವಾಗಿಬಿಡುತ್ತದೆ. ಎರಡೂ ಸಂದರ್ಭಗಳಲ್ಲೂ ಅನನುಕೂಲಿತ ಸಮುದಾಯಗಳ ಮಕ್ಕಳು ವಂಚಿತರಾಗುವ ಸಾಧ್ಯತೆಯೇ ಹೆಚ್ಚು.

ಪ್ರಸ್ತುತ ಸಾಮಾಜಿಕ ವೈವಿಧ್ಯಕ್ಕೆ ಸಂವೇದನಾಶೀಲವಾದ ಬೋಧನಾ ವಿಧಾನದ ಮೇಲೆ ಆ ದ್ವಂದ್ವವು ಪರಿಣಾಮ ಬೀರುತ್ತದೆ. ಹೀಗಾಗಿ ಸಾಮಾಜಿಕ ವೈವಿಧ್ಯತೆಯನ್ನು ಗಮನದಲ್ಲಿಟ್ಟುಕೊಂಡ ಶಿಕ್ಷಣವೆಂದರೆ ಸಮಾಜದ ಸಂಕೀರ್ಣತೆಗೆ ಎಚ್ಚರಿಕೆಯಿಂದ ಸ್ಪಂದಿಸುವುದು ಮತ್ತು ಶಿಕ್ಷಣದಲ್ಲಿ ಸಮಾನ ಗುಣಮಟ್ಟವನ್ನು ಸಾಧಿಸುವುದು.

ಉತ್ಕೃಷ್ಟತೆಯ ಸಾಧನೆಯೇ ಶಿಕ್ಷಣದ ಪ್ರಧಾನ ಉದ್ದೇಶವಾದರೂ ಆ ವ್ಯವಸ್ಥೆಯು ಸಮಾಜದ ಎಲ್ಲಾ ಸದಸ್ಯರಿಗೂ ಸೂಕ್ತವಾದ ವಾತಾವರಣವನ್ನು ಸೃಷ್ಟಿಸಬೇಕಾಗುತ್ತದೆ. ಪಠ್ಯಸೂಚಿಯ ಪರಿಭಾಷೆಯಲ್ಲಿ ಸಾಮಾಜಿಕ ವೈವಿಧ್ಯತೆಯೆಂದರೆ ಜ್ಞಾನ ಅಥವಾ ಜ್ಞಾನಾರ್ಜನೆಗೆ ವೈವಿಧ್ಯಮಯ ವಿಧಾನ ಎಂದೂ ವಾದಿಸಬಹುದು.

ಇದಲ್ಲದೇ, ಸರ್ಕಾರಿ ಶಾಲೆಗಳಲ್ಲಿ ಶಿಕ್ಷಣದ ಗುಣಮಟ್ಟವು ವರ್ಷದಿಂದ ವರ್ಷಕ್ಕೆ ಕುಸಿಯುತ್ತಿದೆ. ಸರ್ಕಾರಿ ಶಾಲೆಗಳ ಹದಗೆಟ್ಟ ಸ್ಥಿತಿಯು ಹಿಂದುಳಿದ ಸಮುದಾಯದ ಮಕ್ಕಳ ಮೇಲೆ ಪರಿಣಾಮ ಬೀರುತ್ತದೆ. ಏಕೆಂದರೆ, ಈ ಶಾಲೆಗಳಿಗೆ ದಾಖಲಾಗುವವರು ಅವರೇ. ದಾಖಲೆಗಳ ಪ್ರಕಾರ ಸರ್ಕಾರಿ ಶಾಲೆಗಳಿಗೆ ಬಡವರೇ ಪ್ರವೇಶ ಪಡೆಯುತ್ತಾರೆ. ಹೆಚ್ಚಿನ ಆದಾಯವಿರುವ ಸಮುದಾಯಗಳ ಮಕ್ಕಳು ಸಾಮಾನ್ಯವಾಗಿ ಖಾಸಗಿ ಶಾಲೆಗಳಲ್ಲಿ ಓದುತ್ತಾರೆ. ದೇಶದ ಹೆಚ್ಚು ಅಭಿವೃದ್ಧಿಯಾಗದ ಪ್ರದೇಶಗಳಲ್ಲಿರುವ ನಿಷ್ಕ್ರಿಯ ಶಾಲೆಗಳತ್ತ ಕಾಳಜಿ ಮುಂದುವರಿಸಬೇಕಾದ ಅಗತ್ಯವಿದೆ. ಪೋಷಕರು ಶಾಲೆಯ ಆಯ್ಕೆ ಮಾಡುವಾಗ ಲಿಂಗ ಪಕ್ಷಪಾತ ಮಾಡುತ್ತಾರೆಂದು ಇತ್ತೀಚಿನ ವರದಿಗಳು ಸೂಚಿಸಿವೆ. ಅದೇನೆಂದರೆ, ಹಳ್ಳಿಗರು ತಮ್ಮ ಹೆಣ್ಣು ಮಕ್ಕಳನ್ನು ಸರ್ಕಾರಿ ಶಾಲೆಗಳಿಗೂ ಗಂಡು ಮಕ್ಕಳನ್ನು ಖಾಸಗಿ ಶಾಲೆಗಳಿಗೂ ಸೇರಿಸುತ್ತಾರೆ. ಇದಕ್ಕೆ ಕಾರಣಗಳು ಎರಡು : (ಅ) ಅವರು ಇನ್ನೂ ಹೆಣ್ಣು ಮಕ್ಕಳನ್ನು ಒಂದು ಹೊರೆ ಎಂದೇ ಪರಿಗಣಿಸುತ್ತಿದ್ದಾರೆ ಮತ್ತು (ಬ) ಸರ್ಕಾರಿ ಶಾಲೆಗಳಲ್ಲಿ ಹೆಣ್ಣು ಮಕ್ಕಳು ವಿವಿಧ ರೀತಿಯ ಪ್ರೋತ್ಸಾಹಗಳಿಗೆ ಅರ್ಹರಾಗಿದ್ದಾರೆ.

ಒಟ್ಟಾರೆಯಾಗಿ, ಸಾಮಾಜಿಕ ಗುಂಪುಗಳು ಶೈಕ್ಷಣಿಕ ಬೆಳವಣಿಗೆಯ ವಿವಿಧ ಹಂತಗಳಲ್ಲಿವೆ. ಇದು ಶಾಲಾ ವ್ಯವಸ್ಥೆಯ ಲಭ್ಯತೆ, ಅದರಲ್ಲಿ ಭಾಗವಹಿಸುವಿಕೆ ಮತ್ತು ಮಕ್ಕಳ ಸಾಧನೆಯ ಕುರಿತಂತೆ ಅವರ ವಿಭಿನ್ನ ಪ್ರತಿಕ್ರಿಯೆಗಳಲ್ಲಿ ಕಾಣಿಸುತ್ತದೆ. ಸಾರ್ವತ್ರಿಕ ಪ್ರಾಥಮಿಕ ಶಿಕ್ಷಣದ ಗುರಿಯನ್ನು ತಲುಪವುದರಲ್ಲಿ ವಿಳಂಬವಾಗುತ್ತಿರುವುದು ಶೈಕ್ಷಣಿಕ ಅಭಿವೃದ್ಧಿಯಲ್ಲಿರುವ ವ್ಯತ್ಯಾಸಕ್ಕೆ ಸಂಬಂಧಿಸಿದೆ.

### 1.5 ವೈವಿಧ್ಯತೆಯು ಶಿಕ್ಷಣಕ್ಕೆ ಒಡ್ಡಿರುವ ಇತ್ತೀಚಿನ ಸವಾಲುಗಳು

ವಿವಿಧ ಗುಂಪುಗಳ ಒಳಗೆ ಮತ್ತು ನಡುವೆ ಚಾಲ್ತಿಯಲ್ಲಿರುವ ಅಸಮಾನತೆಗಳನ್ನು ವಿವರಿಸಲು ಸಾಧ್ಯವಾದ ಹೊರತು ಸಾಮಾಜಿಕ ವೈವಿಧ್ಯತೆಗಳ ಪರಿಕಲ್ಪನೆಯನ್ನು ಸಮಪರ್ಕವಾಗಿ ಅರ್ಥಮಾಡಿಕೊಳ್ಳಲು ಸಾಧ್ಯವಿಲ್ಲ. ಸಾಮಾಜಿಕ ಗುಂಪುಗಳು ಶೈಕ್ಷಣಿಕ ಮತ್ತು ಆರ್ಥಿಕ ಅಭಿವೃದ್ಧಿಯ ವಿವಿಧ ಹಂತಗಳಲ್ಲಿವೆ. ಶಿಕ್ಷಣ ವ್ಯವಸ್ಥೆಯು ಸದ್ಯ ಎದುರಿಸುತ್ತಿರುವ ಕೆಲವು ಪ್ರಮುಖ ಸವಾಲುಗಳನ್ನು ನಾವೀಗ ನೋಡೋಣ.

#### 1.5.1 ಅಪೂರ್ಣವಾಗುಳಿದ ಕಾರ್ಯಸಾಧನೆ

ಎಲ್ಲ ನಾಗರಿಕರಿಗೂ ಮೂಲಭೂತ ಶಿಕ್ಷಣವನ್ನು ನೀಡುವ ಕಾರ್ಯ ಇಂದಿಗೂ ಪೂರ್ಣಗೊಂಡಿಲ್ಲ. 1951 ರಲ್ಲಿ ಭಾರತದ ಸಂವಿಧಾನದ 45ನೇ ವಿಧಿಯು ಸಾರ್ವತ್ರಿಕ ಪ್ರಾಥಮಿಕ ಶಿಕ್ಷಣದ (UEE) ಗುರಿಯನ್ನು ಸಾಧಿಸಬೇಕೆಂದು ಗಡುವನ್ನು ನಿಗದಿಪಡಿಸಿದೆ:

'ಈ ಸಂವಿಧಾನವು ಜಾರಿಗೆ ಬಂದ ಹತ್ತು ವರ್ಷಗಳ ಒಳಗಾಗಿ ಎಲ್ಲಾ ಮಕ್ಕಳಿಗೂ ಅವರು ಹದಿನಾಲ್ಕು ವರ್ಷ ವಯಸ್ಸನ್ನು ಪೂರ್ಣಗೊಳಿಸುವವರೆಗೂ ಉಚಿತ ಮತ್ತು ಕಡ್ಡಾಯ ಶಿಕ್ಷಣವನ್ನು ಒದಗಿಸಲು ರಾಷ್ಟ್ರವು ಪ್ರಯತ್ನಿಸತಕ್ಕದ್ದು'.

ಈ ಸಾಂವಿಧಾನಿಕ ಬದ್ಧತೆಗೆ ಸ್ಪಂದಿಸಿ ಶೈಕ್ಷಣಿಕ ಅಭಿವೃದ್ಧಿಗಾಗಿ ಹಲವಾರು ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿದೆ. ಸಾರ್ವತ್ರಿಕ ಪ್ರಾಥಮಿಕ ಶಿಕ್ಷಣವನ್ನು ಸಾಧಿಸುವ ಸಾಂವಿಧಾನಿಕ ಗುರಿಯು ಐವತ್ತು ವರ್ಷಗಳ ಯೋಜಿತ ಶೈಕ್ಷಣಿಕ ಅಭಿವೃದ್ಧಿಯ ನಂತರವೂ ಕೈಗೂಡಿಲ್ಲ ಮಾತ್ರವಲ್ಲ, ಈಗಲೂ ಅದು ಭಾರತೀಯ ಶಿಕ್ಷಣ ವ್ಯವಸ್ಥೆಗೆ ಅತ್ಯಂತ ಪ್ರಮುಖ ಸವಾಲಾಗಿದೆ. ಸಾರ್ವತ್ರಿಕ ಪ್ರಾಥಮಿಕ ಶಿಕ್ಷಣದ ಗುರಿಯನ್ನು ತಲುಪಲು ವಿಳಂಬವಾಗುತ್ತಿರುವುದಕ್ಕೆ ಮುಖ್ಯ ಕಾರಣವೆಂದರೆ ಪರಿಶಿಷ್ಟ ಜಾತಿ, ಪಂಗಡ, ಅಲ್ಪಸಂಖ್ಯಾತರು ಇಂತಹ ಅನನುಕೂಲಿತ ಸಮುದಾಯಗಳು ತಮಗೆ ಒದಗಿಸಲಾದ ಶೈಕ್ಷಣಿಕ ಸೌಲಭ್ಯಗಳ ಲಾಭವನ್ನು ಪಡೆದುಕೊಳ್ಳಲು ಸಾಧ್ಯವಾಗದಿರುವುದು. ಭಾರತದ ಸಾಮಾಜಿಕ ಗುಂಪುಗಳ ಶೈಕ್ಷಣಿಕ ಅಭಿವೃದ್ಧಿಯು ಇನ್ನೂ ಸರಬರಾಜು ಆಗಬೇಕಾದ ರೂಪದಲ್ಲಿದೆ. ಇತ್ತೀಚಿನ ವರ್ಷಗಳಲ್ಲಿ ಜನರ ಶೈಕ್ಷಣಿಕ ಸ್ಥಿತಿಗತಿಗಳನ್ನು ಸುಧಾರಿಸಲು ಕೇಂದ್ರ ಸರಕಾರ ಪ್ರಾಯೋಜಿತವಾದ ವಿವಿಧ ಶೈಕ್ಷಣಿಕ ಕಾರ್ಯಕ್ರಮಗಳು ಮತ್ತು ಯೋಜನೆಗಳನ್ನು ಪ್ರಾರಂಭಿಸಲಾಗಿದೆ. ಸಾರ್ವತ್ರಿಕ ಪ್ರಾಥಮಿಕ ಶಿಕ್ಷಣದ ಗುರಿಯನ್ನು ಸಾಧಿಸಲು ಕೇಂದ್ರ ಪ್ರಾಯೋಜಿತ ಯೋಜನೆಯಾದ ಸರ್ವ ಶಿಕ್ಷಣ ಅಭಿಯಾನವನ್ನು ಎಲ್ಲಾ ರಾಜ್ಯಗಳಲ್ಲೂ ಪ್ರಾರಂಭಿಸಲಾಗಿದೆ. ಈ ಯೋಜನೆಯ ಯಶಸ್ಸು ಬಹುಮಟ್ಟಿಗೆ ಅದು ಎಷ್ಟು ಪರಿಣಾಮಕಾರಿಯಾಗಿ ಕಾರ್ಯಗತಗೊಳ್ಳುತ್ತದೆ ಎಂಬುದರ ಮೇಲೆ ಅವಲಂಬಿತವಾಗಿದೆ.

### 1.5.2 ಸಾಂಸ್ಕೃತಿಕ ರಾಷ್ಟ್ರೀಯತೆ ಮತ್ತು ರಾಷ್ಟ್ರ ನಿರ್ಮಾಣ

ಮೇಲೆ ಚರ್ಚಿಸಿದಂತೆ ಜನಾಂಗ, ಧರ್ಮ ಮತ್ತು ಭಾಷೆಗಳ ವಿಷಯದಲ್ಲಿ ಭಾರತವು ತುಂಬಾ ವೈವಿಧ್ಯಮಯವಾಗಿದೆ. ಈ ವೈವಿಧ್ಯವು ಒಂದಾಗಿಸುವ ಮತ್ತು ವಿಭಜಿಸುವ ಎರಡೂ ಪ್ರವೃತ್ತಿಗಳನ್ನು ಹೊಂದಿದೆ. ಇಲ್ಲಿ ಉದ್ಭವಿಸುವ ಪ್ರಶ್ನೆಯೆಂದರೆ 'ಸಾಮಾಜಿಕ ವೈವಿಧ್ಯತೆಯು ಸಮಾಜದ ಸಾಮರಸ್ಯದ ವಿಕಾಸಕ್ಕೆ ಕೊಡುಗೆ ನೀಡುವ ಸಾಧ್ಯತೆ ಇದೆಯೇ ಅಥವಾ ಅದು ಸಾಮಾಜಿಕ ಸ್ಥಿರತೆಗೆ ಅಪಾಯ ತಂದೊಡ್ಡಬಹುದೆ?' ಇತ್ತೀಚೆಗೆ ದೇಶವು ಸಾಮಾಜಿಕ ಉದ್ವಿಗ್ನತೆ ಮತ್ತು ಸಂಘರ್ಷವನ್ನು ಅನುಭವಿಸುತ್ತಿದೆ. ಇದು ದೇಶದ ಏಕತೆಗೆ ಅಪಾಯ ಉಂಟು ಮಾಡಬಲ್ಲದ್ದಾಗಿದೆ. ವೈವಿಧ್ಯಮಯ ಗುಂಪುಗಳ ನಡುವೆ ಸಮತೋಲನವನ್ನು ಕಾಯ್ದುಕೊಳ್ಳುವುದು ದೇಶದ ಮುಂದಿರುವ ಪ್ರಮುಖ ಸವಾಲುಗಳಲ್ಲಿ ಒಂದಾಗಿದೆ. ಈ ಸಂದರ್ಭದಲ್ಲಿ ಸಾಮಾಜಿಕ ಸ್ಥಿರತೆ ಮತ್ತು ಬದಲಾವಣೆಯ ಸಾಧನವಾಗಿರುವ ಶಿಕ್ಷಣವು ಪ್ರಮುಖ ಪಾತ್ರವನ್ನು ವಹಿಸುತ್ತದೆ.

ವಿಶ್ವಸಂಸ್ಥೆಯ ಸನ್ನದು ತನ್ನ ಆರಂಭಿಕ ಹೇಳಿಕೆಯಲ್ಲಿ ಹೀಗೆನ್ನುತ್ತದೆ: 'ಯುದ್ಧಗಳು ಪ್ರಾರಂಭವಾಗುವುದು ಜನರ ಮನಸ್ಸಿನಲ್ಲಿ; ಆದ್ದರಿಂದ ಶಾಂತಿ ಸಂರಕ್ಷಣೆಯ ಗೋಡೆಗಳನ್ನೂ ಅಲ್ಲಿಯೇ ನಿರ್ಮಿಸಬೇಕು'. ಆದ್ದರಿಂದ, ಪರಸ್ಪರ ಸ್ಪರ್ಧಿಸುತ್ತಿರುವ ಸಮುದಾಯಗಳ ನಡುವೆ ಶಾಂತಿಯುತ ಸಹಬಾಳ್ವೆಯ ಪರಿಸರವನ್ನು ನಿರ್ಮಿಸುವಲ್ಲಿ ಶಿಕ್ಷಣವು ಪ್ರಮುಖ ಪಾತ್ರವನ್ನು ವಹಿಸುತ್ತದೆ. ಇದು ಬೋಧನಾ ವಿಧಾನ, ಶಿಕ್ಷಕರ ತರಬೇತಿ ಮತ್ತು ತರಗತಿಯ ಚಟುವಟಿಕೆಗಳ ಮೇಲೆ ಪರಿಣಾಮ ಬೀರುತ್ತದೆ. ಹೀಗಿರುವಾಗ ನಾವು: ಭಾರತದಂತಹ ತುಂಬಾ ವೈವಿಧ್ಯಪೂರ್ಣವಾಗಿರುವ ಸಮಾಜದಲ್ಲಿ ವಿದ್ಯಾರ್ಥಿಗಳು ತಮ್ಮ ಪೂರ್ಣ ಸಾಮರ್ಥ್ಯವನ್ನು ಕಂಡುಕೊಳ್ಳುವಲ್ಲಿ ಶಿಕ್ಷಕರು ಹೇಗೆ ನೆರವಾಗಬೇಕು? ಅಥವಾ ವಿದ್ಯಾರ್ಥಿಗಳ ನಡುವಿನ ವ್ಯತ್ಯಾಸದಿಂದ ಹುಟ್ಟಿಕೊಂಡ ಸಂಘರ್ಷಗಳನ್ನು ವಿದ್ಯಾರ್ಥಿಗಳೇ ಪರಿಹರಿಸಿಕೊಳ್ಳುವಂತೆ ಮಾಡುವುದು ಹೇಗೆ? ವಿಭಿನ್ನ ಸಾಮಾಜಿಕ ಹಿನ್ನೆಲೆಗಳ ವ್ಯಕ್ತಿಗಳ ಶೈಕ್ಷಣಿಕ

ಅಗತ್ಯಗಳನ್ನು ಸೂಕ್ಷ್ಮವಾಗಿ ನಿಭಾಯಿಸಲು ಸಹಾಯ ಮಾಡಬಲ್ಲ, ಶಿಕ್ಷಣದಲ್ಲಿ ಆಸಕ್ತಿ ಹೊಂದಿರುವ ಶಿಕ್ಷಕರು, ಪೋಷಕರು ಮತ್ತು ಇತರರಿಗೆ ಯಾವ ಮಾರ್ಗದರ್ಶನವನ್ನು ನೀಡಬಹುದು? ಈ ಬಗೆಯ ಪ್ರಶ್ನೆಗಳನ್ನು ಗಣನೆಗೆ ತೆಗೆದುಕೊಳ್ಳಬೇಕಾಗಿದೆ.

ಶಿಕ್ಷಕರ ತರಬೇತಿ ಮತ್ತು ತರಗತಿಯ ಚಟುವಟಿಕೆಗಳ ಜೊತೆಗೆ ಪಠ್ಯಕ್ರಮ ಮತ್ತು ಪಠ್ಯಪುಸ್ತಕಗಳು ಸಮಾಜದಲ್ಲಿ ಕಂಡುಬರುವ ವೈವಿಧ್ಯಗಳ ಪರಿಣಾಮಗಳಿಗೆ ಸಂವೇದನಾಶೀಲವಾಗಿರಬೇಕು. ನಮ್ಮ ಪಠ್ಯಕ್ರಮ ಮತ್ತು ಪಠ್ಯಪುಸ್ತಕಗಳಲ್ಲಿ ಸಾಮಾಜಿಕ ವೈವಿಧ್ಯತೆಯನ್ನು ಅಂಶೀಕರಿಸುವುದೆಂದರೆ ನಾವು ಇತರರ ಬಗ್ಗೆ ತಿಳಿದುಕೊಳ್ಳುವುದು ಮತ್ತು ಕಠಿಣವಾದ ಸಾಂಸ್ಕೃತಿಕ ಅಡೆತಡೆಗಳನ್ನು ಮೀರುವುದು ಎಂದರ್ಥ. ಚಾಲ್ತಿಯಲ್ಲಿರುವ ಸಾಮಾಜಿಕ ಮತ್ತು ಸಾಂಸ್ಕೃತಿಕ ಆಚರಣೆಗಳನ್ನೂ ಗುಣವಿಶೇಷಗಳನ್ನೂ ಪಠ್ಯಪುಸ್ತಕಗಳಲ್ಲಿ ಒಳಗೊಳ್ಳಬೇಕು. ಇತಿಹಾಸದ ವಿವಾದಗಳು ಒಗ್ಗಟ್ಟು, ಶಾಂತಿ ಮತ್ತು ಸಾಮರಸ್ಯದ ಕಾರ್ಯಸೂಚಿಯನ್ನು ಮುಂಚೂಣಿಗೆ ತಂದಿವೆ. ಸಾಮಾಜಿಕವಾಗಿ ಮತ್ತು ಸಾಂಸ್ಕೃತಿಕವಾಗಿ ವೈವಿಧ್ಯಪೂರ್ಣವಾದ ಸಮಾಜದಲ್ಲಿ ಶಿಕ್ಷಣವನ್ನು ನೀಡುವಾಗ ಬಹುಸಂಸ್ಕೃತಿಯ ವಿಧಾನವನ್ನು ಅಳವಡಿಸಿಕೊಳ್ಳಬೇಕು. ಇದು ವಿವಿಧ ಗುಂಪುಗಳ ಅನುಭವಗಳನ್ನು ಒಳಗೊಳ್ಳುವುದು ಮತ್ತು ಅಂತರ್ಸಾಂಸ್ಕೃತಿಕ ತಿಳುವಳಿಕೆಯನ್ನು ಮುಂದೆ ತರುವುದು ಇವನ್ನು ಅಗತ್ಯವಾಗಿಸುತ್ತದೆ.

**1.5.3 ಜಾಗತೀಕರಣ ಮತ್ತು ಶಿಕ್ಷಣ**

ಆಧುನಿಕ ಔಪಚಾರಿಕ ಶಿಕ್ಷಣವು ಜಾಗತೀಕರಣವನ್ನು ಪ್ರಪಂಚದಾದ್ಯಂತ ಹರಡುವ ಮಾಧ್ಯಮವಾಗಿದೆ. ಮಾಹಿತಿ ತಂತ್ರಜ್ಞಾನ ಕ್ಷೇತ್ರದಲ್ಲಿ ಆಗಿರುವ ಗಮನಾರ್ಹ ಪ್ರಗತಿಯಿಂದಾಗಿ ಈ ಪ್ರಕ್ರಿಯೆಯು ತೀವ್ರಗೊಂಡಿದೆ. ಜಾಗತೀಕರಣವು ಶಿಕ್ಷಣದೊಂದಿಗೆ ನಿಕಟವಾದ ಸಂಬಂಧವನ್ನು ಹೊಂದಿದೆ. ಏಕೆಂದರೆ ಸದಾ ವರ್ಧಿಸುತ್ತಿರುವ ಜ್ಞಾನ ಮತ್ತು ಕೌಶಲಗಳನ್ನು ವರ್ಗಾಯಿಸುವ ಕಾರ್ಯವು ಶಿಕ್ಷಣ ವ್ಯವಸ್ಥೆಗೆ ವಹಿಸಲ್ಪಟ್ಟಿದೆ. ಈ ಪರಿಣಾಮಕ್ಕೆ ಭಾರತವು ಹೊರತಾಗಿಲ್ಲ. ಶಿಕ್ಷಣವು, ಜಾಗತೀಕರಣದ ಕಾರಣವೂ ಪರಿಣಾಮವೂ ಆಗಿದೆ ಎನ್ನುವುದನ್ನು ದೇಶದ ಶೈಕ್ಷಣಿಕ ಬೆಳವಣಿಗೆಯ ಇತಿಹಾಸವು ತೋರಿಸುತ್ತದೆ. ಬ್ರಿಟಿಷರು ತಮ್ಮ ಜಾಗತಿಕ ಹಿತಾಸಕ್ತಿಗಳಿಗೆ ಅನುಗುಣವಾಗಿ ಭಾರತದಲ್ಲಿ ಆಧುನಿಕ ಔಪಚಾರಿಕ ಶಿಕ್ಷಣವನ್ನು ಪ್ರಾರಂಭಿಸಿದರು. ಇಂದಿಗೂ ಬಹುಮಟ್ಟಿಗೆ ಶಿಕ್ಷಣದ ಗುಣವಿಶೇಷಗಳು ಮತ್ತು ಒತ್ತು ಅದೇ ಆಗಿದೆ. ಶಾಲಾ ಶಿಕ್ಷಣ ಮತ್ತು ಉನ್ನತ ಶಿಕ್ಷಣಗಳೆರಡೂ ಜಾಗತಿಕ ಹಿತಾಸಕ್ತಿಗೆ ಪೂರಕವಾಗೇ ಇವೆ. ಏಕೆಂದರೆ ಅವು ವಿದ್ಯಾರ್ಥಿಗಳನ್ನು ಅವರ ಸಾಂಸ್ಕೃತಿಕ ಬೇರುಗಳಿಂದ ಬೇರ್ಪಡಿಸುವ ಮೂಲಕ ಹೊರ ಪ್ರಪಂಚಕ್ಕೆ ಅಣಿಗೊಳಿಸುತ್ತವೆ.

ಎಲ್ಲಾ ಕ್ಷೇತ್ರಗಳೂ ಖಾಸಗೀಕರಣಗೊಳ್ಳುತ್ತಿರುವ ಪ್ರಕ್ರಿಯೆಯು ಜಾಗತೀಕರಣಕ್ಕೆ ಹೆಚ್ಚಿನ ಪ್ರೇರಣೆ ನೀಡುತ್ತಿದೆ. ಇದು ಶಿಕ್ಷಣಕ್ಕೂ ಅನ್ವಯಿಸುತ್ತದೆ. ದೇಶದ ವಿವಿಧ ಭಾಗಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಖಾಸಗಿ ಶಾಲೆಗಳನ್ನು ತೆರೆಯಲಾಗುತ್ತಿದೆ. ಈ ವಿದ್ಯಮಾನವು ಗ್ರಾಮೀಣ ಪ್ರದೇಶಗಳ ಮೇಲೂ ಪರಿಣಾಮ ಬೀರುತ್ತಿದೆ. ಖಾಸಗಿ ಶಾಲೆಗಳ ಸಂಖ್ಯೆಯಲ್ಲಿ ಹೆಚ್ಚಳವಾಗುತ್ತಿರುವುದು ಸಮಾಜದ ಶ್ರೀಮಂತ ವರ್ಗಗಳ ಶೈಕ್ಷಣಿಕ ಬೇಡಿಕೆಯ ಕಾರಣದಿಂದ ಮತ್ತು ಸರ್ಕಾರಿ ಶಾಲೆಗಳು ನೀಡುತ್ತಿರುವ ಕಡಿಮೆ ಗುಣಮಟ್ಟದ ಶಿಕ್ಷಣದ ಬಗ್ಗೆ ಆ ವರ್ಗಗಳ ಅಸಮಾಧಾನದ ಪರಿಣಾಮವಾಗಿ. ಶಿಕ್ಷಣ ಕ್ಷೇತ್ರದಲ್ಲಿ ಹೆಚ್ಚುತ್ತಿರುವ ಖಾಸಗೀಕರಣವು ಅನನುಕೂಲ

ಪರಿಸ್ಥಿತಿಯಲ್ಲಿರುವವರು ಮತ್ತು ಅನುಕೂಲಸ್ಥರ ನಡುವಿನ ಅಸಮಾನತೆಯನ್ನು ಹೆಚ್ಚಿಸುತ್ತದೆಯಲ್ಲದೇ ಸರ್ಕಾರಿ ಶಾಲೆಗಳಲ್ಲಿ ಗುಣಮಟ್ಟದ ಸುಧಾರಣೆಗೆ ಬದ್ಧತೆಯನ್ನು ಕಡಿಮೆ ಮಾಡುತ್ತದೆ.

ಸಾಂಸ್ಕೃತಿಕ ಮತ್ತು ಸಾಮಾಜಿಕ ಗಡಿಗಳನ್ನು ಒಡೆಯುವ ಮೂಲಕ ಜಾಗತೀಕರಣವು ವ್ಯಕ್ತಿವಾದವನ್ನು ಉತ್ತೇಜಿಸುತ್ತದೆ. ಸಮರ್ಥರು ಮಾತ್ರವೇ ಉಳಿದುಕೊಳ್ಳಬೇಕೆಂಬ ನೀತಿಯನ್ನು ಸಮರ್ಥಿಸುವ ಮೂಲಕ ಜಾಗತೀಕರಣವು ನಿರ್ದಿಷ್ಟ ಸಮುದಾಯಗಳಲ್ಲಿ ಕಂಡುಬರುವ ಅನನುಕೂಲತೆಗಳು ಇನ್ನಷ್ಟು ಹೆಚ್ಚುವಂತೆ ಮಾಡುತ್ತದೆ. ಜಾಗತೀಕರಣದ ಸನ್ನಿಹಿತ ಅಪಾಯಗಳಲ್ಲಿ ಒಂದೆಂದರೆ, ಅದು ವಂಚಿತ ಸಮುದಾಯಗಳನ್ನು ವ್ಯಕ್ತಿಗಳ ಮರ್ಜಿಗೆ ಅಧೀನವಾಗಿಸುತ್ತದೆ ಮತ್ತು ಕಾರ್ಯಸಾಧುವಾದ ಪರ್ಯಾಯವನ್ನು ಒದಗಿಸದೆ ಸ್ಥಳೀಯ ದೇಶೀ ಜೀವನೋಪಾಯ ವ್ಯವಸ್ಥೆಗಳನ್ನು ಧ್ವಂಸಗೊಳಿಸುತ್ತದೆ. ಈ ಪರಕೀಯತೆಯ ಪ್ರಕ್ರಿಯೆಯು ಶಿಕ್ಷಣ ವ್ಯವಸ್ಥೆಯಲ್ಲಿ ಅಂತರ್ಗತವಾಗಿದೆ. 'ಪ್ರಸ್ತುತ ಶಿಕ್ಷಣ ವ್ಯವಸ್ಥೆಯ ದೊಡ್ಡ ಕೇಡೆಂದರೆ ಅದು ನಮ್ಮ ಅಸ್ತಿತ್ವದ ನಿರಂತರತೆಯನ್ನು ಮುರಿದುಬಿಟ್ಟಿದೆ' ಎಂಬ ತಮ್ಮ ಹೇಳಿಕೆಯಲ್ಲಿ ಮಹಾತ್ಮಾ ಗಾಂಧಿಯವರು ಈ ಅಪಾಯವನ್ನು ಎತ್ತಿ ತೋರಿಸಿದ್ದರು.

**1.6 ಉಪಸಂಹಾರ**

ಭಾರತವು ವೈವಿಧ್ಯತೆಗಳ ನಾಡು. ಆ ವೈವಿಧ್ಯತೆಯು  ಭಾಷೆ, ಧರ್ಮ, ಜಾತಿ, ಬುಡಕಟ್ಟು ಮತ್ತು ಲಿಂಗ ಇವುಗಳಲ್ಲಿ ವ್ಯಕ್ತವಾಗುತ್ತದೆ. ವೈವಿಧ್ಯತೆಯು ಆಂತರಿಕ ತಾರತಮ್ಯ ಮತ್ತು ಬಾಹ್ಯ ಪ್ರಭಾವ ಇವೆರಡರ ಪರಿಣಾಮವಾಗಿದೆ. ತಾರತಮ್ಯ ಮತ್ತು ಏಕೀಕರಣದ ಪ್ರಕ್ರಿಯೆಗಳು ಏಕಕಾಲದಲ್ಲಿ ನಡೆಯುತ್ತಿರುತ್ತವೆ. ಒಂದು ಸಾಮಾಜಿಕ ಚಹರೆಯಿಂದ ಪ್ರತ್ಯೇಕವಾಗುವ ಗುಂಪುಗಳು ಇನ್ನಿತರ ಚಹರೆಗಳಿಂದಾಗಿ ಒಂದಾಗುವುದನ್ನು ಗಮನಿಸಬಹುದು. ಉದಾಹರಣೆಗೆ, ಹಿಂದೂ, ಮುಸಲ್ಮಾನ ಮುಂತಾಗಿ ಧಾರ್ಮಿಕ ಚಹರೆಗಳ ಮೇಲೆ ವಿಭಜಿಸಲ್ಪಟ್ಟಿರುವ ಗುಂಪುಗಳು ಭಾಷೆ, ಲಿಂಗ, ಇತ್ಯಾದಿಗಳಲ್ಲಿ ಒಂದಾಗಿವೆ. ಹೀಗೆ *ವಿವಿಧತೆಯ ನಡುವೆ ಏಕತೆ* ಭಾರತೀಯ ಸಮಾಜದಲ್ಲಿ ಚಾಲ್ತಿಯಲ್ಲಿದೆ. ಆದಾಗ್ಯೂ ವೈವಿಧ್ಯತೆ ಮತ್ತು ಏಕತೆಯ ನಡುವಿನ ಸಮತೋಲನವು ಸೂಕ್ಷ್ಮವಾಗಿದೆಯಲ್ಲದೇ ಹಲವಾರು ಸಮಸ್ಯೆಗಳಿಂದ ಕೂಡಿದೆ. ಹೀಗಾಗಿ ವಿವಿಧ ಗುಂಪುಗಳ ನಡುವಿನ ಅಧಿಕಾರ ಸಂಬಂಧಗಳನ್ನು ವಿಶ್ಲೇಷಿಸುವ ಅಗತ್ಯವಿದೆ.

ಶಿಕ್ಷಣ ವ್ಯವಸ್ಥೆಗೆ ಸಂಬಂಧಿಸಿದಂತೆ ಸಾಮಾಜಿಕ ವೈವಿಧ್ಯದ ಪ್ರಮುಖ ಇಂಗಿತಾರ್ಥವೆಂದರೆ ವಿವಿಧ ಗುಂಪುಗಳನ್ನು ಸಮಾನ ಪಾತಳಿಯಲ್ಲಿರುವಂತೆ ನೋಡಿಕೊಳ್ಳುವುದು. ಏಕೆಂದರೆ ಈ ಗುಂಪುಗಳು ಶೈಕ್ಷಣಿಕ ಮತ್ತು ಆರ್ಥಿಕ ಅಭಿವೃದ್ಧಿಯ ವಿವಿಧ ಹಂತಗಳಲ್ಲಿವೆ. ಶಿಕ್ಷಣ ವ್ಯವಸ್ಥೆಯ ಒಂದು ಮೂಲ ಉದ್ದೇಶವೇನೆಂದರೆ, ಜನಸಂಖ್ಯೆಯಲ್ಲಿ ಅಸ್ತಿತ್ವದಲ್ಲಿರುವ ವೈವಿಧ್ಯಗಳಿಗೆಲ್ಲ ಅವಕಾಶವನ್ನು ಕಲ್ಪಿಸುವುದು. ಆದಾಗ್ಯೂ ಕಳೆದ ಐದು ದಶಕಗಳಲ್ಲಿ ಶಿಕ್ಷಣ ಕ್ಷೇತ್ರದಲ್ಲಿ ಗಣನೀಯ ಪ್ರಗತಿಯನ್ನು ಸಾಧಿಸಿದ್ದರೂ, ಲಿಂಗ ಮತ್ತು ಸಾಮಾಜಿಕ ಗುಂಪುಗಳ ವಿಷಯದಲ್ಲಿ ಪ್ರದೇಶಗಳು, ರಾಜ್ಯಗಳ ನಡುವೆ ಅಂತರಗಳು ಕಂಡುಬರುತ್ತವೆಂದು ಶೈಕ್ಷಣಿಕ ಅಭಿವೃದ್ಧಿಯ ಮೌಲ್ಯಮಾಪನವು ಸೂಚಿಸಿದೆ. ಸ್ವತಂತ್ರ ಭಾರತದಲ್ಲಿ ಸಾಂವಿಧಾನಿಕವಾಗಿ ಸಮಾನತೆಯ ಭರವಸೆಯನ್ನು ನೀಡಲಾಗಿದ್ದರೂ ಸಹಿತ, ಶಿಕ್ಷಣ ಸಂಸ್ಥೆಗಳಿಗೆ ಪ್ರವೇಶ, ಶಿಕ್ಷಣದಲ್ಲಿ ಭಾಗವಹಿಸುವಿಕೆ ಮತ್ತು ಸಾಧನೆಯ ವಿಷಯದಲ್ಲಿ ಅನುಕೂಲಸ್ಥ ಮತ್ತು ಅನನುಕೂಲಿತ ಗುಂಪುಗಳ ನಡುವೆ ಶ್ರೇಣೀಕರಣವು ಬಲಗೊಳ್ಳುತ್ತಲೇ ಇದೆ. ಬುಡಕಟ್ಟುಗಳು,

ದಲಿತರು (ಪರಿಶಿಷ್ಟ ಜಾತಿಗಳು), ಅಲ್ಪಸಂಖ್ಯಾತರು ಮತ್ತು ಸ್ತ್ರೀಯರು ಅವಕಾಶ ವಂಚಿತರಾಗುತ್ತಿದ್ದಾರೆ; ಮತ್ತಷ್ಟು ಅಂಚಿಗೆ ತಳ್ಳಲ್ಪಡುತ್ತಿದ್ದಾರೆ.

ಸಾರ್ವತ್ರಿಕ ಪ್ರಾಥಮಿಕ ಶಿಕ್ಷಣದ ಗುರಿಯನ್ನು ತಲುಪುವ, ಹಿಂದುಳಿದವರನ್ನು ರಾಷ್ಟ್ರೀಯ ಮುಖ್ಯವಾಹಿನಿಗೆ ತರುವ ಮತ್ತು ಜಾಗತೀಕರಣದ ಅಪಾಯಗಳ ವಿರುದ್ಧ ಅವರನ್ನು ಅಣಿಗೊಳಿಸುವ ಪ್ರಮುಖ ಸವಾಲುಗಳನ್ನು ಶಿಕ್ಷಣ ವ್ಯವಸ್ಥೆಯು ಎದುರಿಸುತ್ತಿದೆ. ಭಾರತದಲ್ಲಿ ಶಿಕ್ಷಣ ವ್ಯವಸ್ಥೆಯ ಎದುರಿಗಿರುವ ಒಂದು ಪ್ರಮುಖ ಸವಾಲು ಎಂದರೆ ಸಾರ್ವತ್ರಿಕ ಪ್ರಾಥಮಿಕ ಶಿಕ್ಷಣದ ಗುರಿಯನ್ನು ತಲುಪುವುದು. ಹೀಗೆ ತಲುಪುವಲ್ಲಿ ವಿಳಂಬವಾಗುತ್ತಿರುವುದಕ್ಕೆ ಮುಖ್ಯ ಕಾರಣವೆಂದರೆ ಅತ್ಯಂತ ಹಿಂದುಳಿದವರನ್ನು, ಅಂದರೆ ಪರಿಶಿಷ್ಟ ಜಾತಿಗಳು, ಪಂಗಡಗಳು ಮತ್ತು ಹುಡುಗಿಯರನ್ನು ಸಂಪೂರ್ಣವಾಗಿ ತನ್ನ ವ್ಯಾಪ್ತಿಯೊಳಗೆ ತರಲು ಶಿಕ್ಷಣ ವ್ಯವಸ್ಥೆಗೆ ಇನ್ನೂ ಸಾಧ್ಯವಾಗಿಲ್ಲದಿರುವುದು. ಈ ಗುಂಪುಗಳು ಹಲವಾರು ಅನನುಕೂಲತೆಗಳಿಂದ ಬಳಲುತ್ತಿವೆ. ಶಿಕ್ಷಣ ವ್ಯವಸ್ಥೆಯು ಹಿಂದುಳಿದ ಗುಂಪುಗಳನ್ನು ವಿಶೇಷ ಗಮನ ನೀಡಬೇಕಾದ ಗುಂಪುಗಳಾಗಿ ಪರಿಗಣಿಸುವುದು ಮತ್ತು ಅತ್ಯಂತ ಹಿಂದುಳಿದವರು ಗರಿಷ್ಠ ಪ್ರಯೋಜನಗಳನ್ನೂ ಬೆಂಬಲವನ್ನೂ ಪಡೆಯುವ ರೀತಿಯಲ್ಲಿ ತನ್ನ ಬೋಧನಾ ವಿಧಾನವನ್ನು ಸುಧಾರಿಸುವುದು ಅಗತ್ಯವಾಗಿದೆ.

**1.7 ನಿಮ್ಮ ಪ್ರಗತಿಯನ್ನು ಪರಿಶೀಲಿಸಲು ಉತ್ತರಗಳು**

1. ಸಾಮಾಜಿಕ ವೈವಿಧ್ಯತೆಯನ್ನು 'ನಿರ್ದಿಷ್ಟ ಭೌಗೋಳಿಕ-ರಾಜಕೀಯ ವ್ಯವಸ್ಥೆಯಲ್ಲಿ ವಿವಿಧ ಸಾಮಾಜಿಕ ಗುಂಪುಗಳ ಸಹ- ಅಸ್ತಿತ್ವ' ಎಂದು ಅರ್ಥೈಸಬಹುದು.
2. ಇವು ಭಾಷೆ, ಧರ್ಮ, ಜಾತಿ, ಬುಡಕಟ್ಟು, ಲಿಂಗವನ್ನು ಒಳಗೊಂಡಿರಬಹುದು.
3. ವಿವಿಧ ವೈವಿಧ್ಯಪೂರ್ಣ ಸಾಮಾಜಿಕ ಗುಂಪುಗಳ ನಡುವೆವ್ಯತ್ಯಾಸಾತ್ಮಕ ಅವಕಾಶ ಇರುವುದು,
   - ವಿವಿಧ ವೈವಿಧ್ಯಪೂರ್ಣ ಸಾಮಾಜಿಕ ಗುಂಪುಗಳ ನಡುವೆ ಅಸಮಾನವಾದ ಭಾಗವಹಿಸುವಿಕೆ ಹಾಗೂ ವಿದ್ಯಾಭ್ಯಾಸ ಮುಕ್ತಾಯವು ಕಂಡುಬರುವುದು,
   - ವಿವಿಧ ವೈವಿಧ್ಯಪೂರ್ಣ ಸಾಮಾಜಿಕ ಗುಂಪುಗಳ ನಡುವೆ ಶಿಕ್ಷಣದಲ್ಲಿ ಅಸಮಾನ ಗುಣಮಟ್ಟದಿಂದಾಗಿ ಸಾಧನೆಯ ಮಟ್ಟದಲ್ಲೂ ಸಹಿತ ವ್ಯತ್ಯಾಸವಿರುವುದು.
4. ಎಲ್ಲರಿಗೂ ಶಿಕ್ಷಣ ನೀಡುವ ಅಪೂರ್ಣವಾಗುಳಿದ ಗುರಿಯನ್ನು ತಲುಪವುದು,
   - ಸಾಂಸ್ಕೃತಿಕ ರಾಷ್ಟ್ರೀಯತೆ,
   - ರಾಷ್ಟ್ರ ನಿರ್ಮಾಣ,
   - ಶಿಕ್ಷಣದ ಮೇಲೆ ಜಾಗತೀಕರಣದ ಪರಿಣಾಮ.

***

## ಪರಾಮರ್ಶನೆಗಳು


Dubey, S.C. (1992), *Indian Society,* New Delhi, National Book Trust-India.

Freire, P. (1972), *Pedagogy of the Oppressed*, Harmondsworth, Penguin

Hulmes, E. (1989), *Education and Cultural Diversity*, London, Longman

Probel Team. (1999), *Public Report on Basic Education in India*, New Delhi, Oxford University Press.

Shah, A.B. (1978), *The Social Context of Education,* New Delhi, Allied Publishers Pvt. Ltd.

Social Diversity and Education.

Shukla, S. and Kumar, K. (ed.) *Sociological Perspectives in Education,* Delhi, Chanakya Publications.